| | | |
|---|---|---|
| | | -ಪರವಾನಗಿ ಇಲ್ಲದೆ ನಿಯಮ ಉಲ್ಲಂಘಿಸಿ ಸಾಗಾಣಿಕೆ ಮಾಡಿರುವುದು ಕಂಡುಬಂದಿದ್ದು, ಸದರಿ ಪ್ರಮಾಣಕ್ಕೆ ರಾಜಧನದ 05 ಪಟ್ಟು ದಂಡದ ಮೊತ್ತ ರೂ.22,13,100/-ಗಳನ್ನು ವಿಧಿಸಿ ಪಾವತಿಸುವಂತೆ ದಿನಾಂಕ 25.10.2019, 15.02.2020 ಹಾಗೂ 09.09.2020 ರಂದು ನೋಟೀಸ್ ಜಾರಿ ಮಾಡಲಾಗಿರುತ್ತದೆ.<br>ಸರ್ಕಾರದ ಆದೇಶ ಸಂಖ್ಯೆ ಸಿಐ 70 ಎಂಜಿಎಸ್ 2020, ದಿನಾಂಕ 10.09.2020 ರಂತೆ, ಚಾಲ್ತಿಯಲ್ಲಿರುವ ಕಲ್ಲುಗಣಿ ಗುತ್ತಿಗೆ ಪ್ರದೇಶಗಳಲ್ಲಿ ಗುತ್ತಿಗೆದಾರರು ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ತೆಗೆದಿರುವ ಉಪಖನಿಜದ ಪ್ರಮಾಣವನ್ನು ಡ್ರೋಣ್ / ಡಿಜಿಪಿಎಸ್ ಸಮೀಕ್ಷೆಯಿಂದ ಅಂದಾಜಿಸಿ, ಕ್ವಾರಿ ಪಿಟ್ಟಿನ Reduced Level ಗಳನ್ನು ನಿಗದಿಪಡಿಸುವ ಸಂಬಂಧ 2020-21 ನೇ ಸಾಲಿನಲ್ಲಿ ಡ್ರೋಣ್ / ಡಿಜಿಪಿಎಸ್ ಸರ್ವೆ ಕಾರ್ಯ ನಡೆಸುವ ಸೇವಾದಾರರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡಲು ದಿನಾಂಕ 18.12.2020 ರಂದು ನಡೆದ ಜಿಲ್ಲಾ ಟಾಸ್ಕ್ ಪೋರ್ಸ್ ಸಮಿತಿ ಸಭೆಯಲ್ಲಿ ಚರ್ಚಿಸಿ, ಟೆಂಡರ್ ಆಹ್ವಾನ ಸಮಿತಿ ಹಾಗೂ ಟೆಂಡರ್ ಮೌಲ್ಯಮಾಪನ ಸಮಿತಿಯನ್ನು ರಚನೆ ಮಾಡಲಾಗಿರುತ್ತದೆ.<br>ಅದರಂತೆ ಡ್ರೋಣ್ / ಡಿಜಿಪಿಎಸ್ ಸರ್ವೆ ಕಾರ್ಯ ನಡೆಸುವ ಸೇವಾದಾರರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡಲು ಇ-ಟೆಂಡರ್ ಪ್ರಕ್ರಿಯೆ ಕೈಗೊಳ್ಳಲಾಗುತ್ತಿದೆ. ಡ್ರೋಣ್ ಸರ್ವೆ ಕಾರ್ಯ ಕೈಗೊಂಡು ವರದಿಯನ್ನು ಪಡೆದು ಪರಿಶೀಲಿಸಿ, ಪರವಾನಗಿ ಪ್ರಮಾಣಕ್ಕಿಂತ ಹೆಚ್ಚುವರಿಯಾಗಿ ಕಟ್ಟಡ ಕಲ್ಲು ಸಾಗಾಣಿಕೆ ಮಾಡಿರುವ ಬಗ್ಗೆ ದೃಢಪಟ್ಟಲ್ಲಿ ನಿಯಮಾನುಸಾರ ಕ್ರಮವಹಿಸಲಾಗುವುದು. |
| ಆ) | ಸದರಿ ಶ್ರೀ ಪುಷ್ಪಗಿರಿ ಎಂ-ಸ್ಯಾಂಡ್ ಅಂಡ್ ಕ್ರಷರ್ ಕಂಪನಿ ವಿರುದ್ಧ ಗಣಿಗಾರಿಕೆಯಲ್ಲಿ ರಿಗ್ ಬ್ಲಾಸ್ಟಿಂಗ್ ಮಾಡಿ ಅಕ್ಕ-ಪಕ್ಕದ ಗ್ರಾಮಗಳಲ್ಲಿನ ಮನೆಗಳು ಬಿರುಕು ಬಿಟ್ಟಿರುವುದರಿಂದ ಸದರಿ ಕ್ರಷರ್ ಗೆ ನೀಡಿರುವ ಎನ್.ಓ.ಸಿ.ಯನ್ನು ಕೂಡಲೇ ರದ್ದುಪಡಿಸುವಂತೆ ಸಾರ್ವಜನಿಕರಿಂದ ಹಲವಾರು ದೂರುಗಳು ಹಾಸನ | ಶ್ರೀ ಎಂ.ಎ.ರವಿಕುಮಾರ್ ಬಿನ್ ಅಣ್ಣೇಗೌಡ, ರವರಿಗೆ ಹೊಳೆನರಸೀಪುರ ತಾಲ್ಲೂಕು ಕಲ್ಲೋಡೆಬೋರೆ ಕಾವಲ್ ಗ್ರಾಮದ ಸರ್ವೆ ನಂ. 1/ಪಿ1ರ 3-15ಎಕರೆ ಪ್ರದೇಶದಲ್ಲಿ ಕಂದಾಯ ಇಲಾಖೆ ಹಾಗೂ ಅರಣ್ಯ ಇಲಾಖೆಗಳಿಂದ ನಿರಾಕ್ಷೇಪಣಾ ಪತ್ರಗಳನ್ನು ಪಡೆದು ಮಂಜೂರು ಮಾಡಿರುವ ಕಟ್ಟಡ ಕಲ್ಲುಗಣಿ ಗುತ್ತಿಗೆ ಸಂಖ್ಯೆ 538ನ್ನು ದಿನಾಂಕ 07.06.2017 ರಿಂದ 20 ವರ್ಷಗಳಿಗೆ ಮಂಜೂರು ಮಾಡಿದ್ದು, ಸದರಿ ಕಲ್ಲುಗಣಿ ಗುತ್ತಿಗೆದಾರರು ಕಂದಾಯ ಇಲಾಖೆಯ ಅನುಮತಿ ನೀಡಿರುವ ಪ್ರದೇಶಕ್ಕೆ ಗಡಿ ಉಲ್ಲಂಘನೆ ಮಾಡಿ ಅಕ್ಕಪಕ್ಕದ ಭೂಮಿ ಒತ್ತುವರಿ ಮಾಡಿರುವುದರಿಂದ ಕಲ್ಲುಗಣಿ ಗುತ್ತಿಗೆ- |

| | | |
|---|---|---|
| | ಜಿಲ್ಲಾಧಿಕಾರಿಗಳಿಗೆ, ಹಾಸನದ ಉಪ ವಿಭಾಗಾಧಿಕಾರಿಗಳಿಗೆ ಹಾಗೂ ಹೊಳೆನರಸೀಪುರ ತಹಶೀಲ್ದಾರ್ ರವರಿಗೆ ಬಂದಿರುವ ಹಿನ್ನೆಲೆಯಲ್ಲಿ ಹಾಸನದ ಭೂ ಮತ್ತು ಗಣಿ ವಿಜ್ಞಾನ ಇಲಾಖೆಯ ಅಧಿಕಾರಿಗಳು ಹಾಗೂ ಹೊಳೆನರಸೀಪುರ ತಹಶೀಲ್ದಾರ್ ರವರು ಜಂಟಿಯಾಗಿ ಸ್ಥಳ ಪರಿವೀಕ್ಷಣೆ ನಡೆಸಿ ಸದರಿ ಕ್ರಷರ್ ಗೆ ನೀಡಿರುವ ಎನ್.ಓ.ಸಿ.ಯನ್ನು ವಜಾಗೊಳಿಸುವಂತೆ ಹಾಸನದ ಜಿಲ್ಲಾಧಿಕಾರಿಗಳು ಹಾಗೂ ಹಾಸನದ ಉಪವಿಭಾಗಾಧಿಕಾರಿಗಳಿಗೆ ವರದಿಯನ್ನು ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಜೂರಾತಿಗೆ ಕಂದಾಯ ಇಲಾಖೆಯಿಂದ ನೀಡಿರುವ ನಿರಾಕ್ಷೇಪಣಾ ಪತ್ರವನ್ನು ಹಿಂಪಡೆಯುವಂತೆ ತಹಸೀಲ್ದಾರ್, ಹೊಳೆನರಸೀಪುರ ರವರು ದಿನಾಂಕ 04.02.2020 ರಂದು ಜಿಲ್ಲಾಧಿಕಾರಿ, ಹಾಸನ ಜಿಲ್ಲೆ ರವರಿಗೆ ವರದಿ ಸಲ್ಲಿಸಿರುವುದು ಕಂಡುಬಂದಿರುತ್ತದೆ. |
| ಇ) | ಈ ವರದಿ ಮೇರೆಗೆ ಶ್ರೀ ಪುಷ್ಪಗಿರಿ ಎಂ-ಸ್ಯಾಂಡ್ ಅಂಡ್ ಕ್ರಷರ್ ಗೆ ನೀಡಿರುವ ಎನ್.ಓ.ಸಿ.ಯನ್ನು ವಜಾಗೊಳಿಸಲು ಹಾಸನದ ಜಿಲ್ಲಾಧಿಕಾರಿಗಳು ಹಾಗೂ ಉಪ ವಿಭಾಗಾಧಿಕಾರಿಗಳು ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ಮಾಹಿತಿ ನೀಡುವುದು)? | ತಹಸೀಲ್ದಾರ್ ಹೊಳೆನರಸೀಪುರ ರವರ ದಿನಾಂಕ 04.02.2020ರ ವರದಿಯಂತೆ ದಿನಾಂಕ 23.09.2020 ರಂದು ಕಂದಾಯ, ಭೂಮಾಪನ ಇಲಾಖೆ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖಾ ತಾಂತ್ರಿಕ ಅಧಿಕಾರಿಗಳು ಮತ್ತು ಸುತ್ತಮುತ್ತಲಿನ ಗ್ರಾಮಸ್ಥರು ಹಾಗೂ ಗುತ್ತಿಗೆ ಪ್ರದೇಶದ ಸುತ್ತಲಿನ ಪಟ್ಟಾದಾರರ ಸಮಕ್ಷಮ ಪರಿಶೀಲಿಸಿ, ಸ್ಥಳ ಪರಿಶೀಲನಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಬಗ್ಗೆ ದಿನಾಂಕ 25.09.2020 ರಂದು ನಡೆದ ಜಿಲ್ಲಾ ಟಾಸ್ಕ್ ಫೋರ್ಸ್ ಸಮಿತಿ ಸಭೆಯಲ್ಲಿ ಚರ್ಚಿಸಲಾಗಿ, ಮಂಜೂರಾಗಿರುವ ಕಲ್ಲುಗಣಿ ಗುತ್ತಿಗೆ ಪ್ರದೇಶದ ಒಳಗಡೆಯೇ ಕಲ್ಲುಗಣಿಗಾರಿಕೆಯನ್ನು ಕೈಗೊಂಡಿದ್ದು, ಗುತ್ತಿಗೆ ಪ್ರದೇಶ ಹೊರತುಪಡಿಸಿ ಯಾವುದೇ ಒತ್ತುವರಿ ಮಾಡಿ ಗಣಿಗಾರಿಕೆಯನ್ನು ಕೈಗೊಂಡಿಲ್ಲದ ಕಾರಣ, ಈ ಹಿಂದೆ ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಜಿಲ್ಲಾಡಳಿತದಿಂದ ವಿತರಿಸಲಾಗಿರುವ ಕಂದಾಯ ಇಲಾಖಾ ನಿರಾಕ್ಷೇಪಣೆಯನ್ನು ಮುಂದುವರೆಸುವ ಬಗ್ಗೆ ಸಮಿತಿ ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ. |

ಸಂಖ್ಯೆ ಸಿಐ 28 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.

ಕರ್ನಾಟಕಸರ್ಕಾರ

ಸಂಖ್ಯೆ: HORTI 28 HGM 2021

ಕರ್ನಾಟಕಸರ್ಕಾರದಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 28-01-2021

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

89 u/s
29/01/2021.

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ಹೆಚ್.ಡಿ.ರೇವಣ್ಣ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:117ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಹೆಚ್.ಡಿ.ರೇವಣ್ಣ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:117ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

T.V. Sunandamma 28/01/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ
28/1

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 117

ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ.

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಹಾಸನ ಜಿಲ್ಲೆಯಲ್ಲಿ ಪ್ರಮುಖವಾಗಿ ತೋಟಗಾರಿಕೆ ಬೆಳೆಗಳಾದ ಆಲೂಗಡ್ಡೆ, ತೆಂಗು, ಕಾಫಿ, ಮೆಣಸು, ಅಡಿಕೆ, ಶುಂಠಿ, ಹಣ್ಣಿನ ಬೆಳೆಗಳಾದ ಮಾವು, ಬಾಳೆ, ಸಪೋಟ, ಪಪ್ಪಾಯ ಹಾಗೂ ತರಕಾರಿ ಬೆಳೆಗಳಾದ ಟೊಮೆಟೋ, ಹಸಿರು ಮೆಣಸಿನಕಾಯಿ, ಬೀನ್ಸ್, ಈರುಳ್ಳಿ, ಪ್ರಮುಖ ಬೆಳೆಗಳನ್ನು ಸುಮಾರು ಎರಡು ಲಕ್ಷ ನಲವತ್ತೈದು ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿರುವುದನ್ನು ಗಮನಿಸಿಯೂ, ಸರ್ಕಾರ ಹಾಸನದ ಸೋಮನಹಳ್ಳಿ ಕಾವಲಿನ ತೋಟಗಾರಿಕೆ ಕ್ಷೇತ್ರದಲ್ಲಿ ಸುಮಾರು 370 ಎಕರೆ ಪ್ರದೇಶದಲ್ಲಿ ಹೊಸದಾಗಿ 2019-20ನೇ ಸಾಲಿನಲ್ಲಿ ತೋಟಗಾರಿಕೆ ಮಹಾವಿದ್ಯಾಲಯ ಸ್ಥಾಪನೆಗೆ ಹಣಕಾಸು ಇಲಾಖೆಯ ಅನುಮತಿಯೊಂದಿಗೆ, ಸಂಪುಟದ ಸಭೆಯಲ್ಲಿ ತೀರ್ಮಾನಿಸಿ, ಹಾಸನದ ಸೋಮನಹಳ್ಳಿ ಕಾವಲಿನಲ್ಲಿ ತೋಟಗಾರಿಕೆ ಕ್ಷೇತ್ರದಲ್ಲಿ 2019-20ನೇ ಸಾಲಿನಲ್ಲಿ ಮಹಾವಿದ್ಯಾಲಯ ಸ್ಥಾಪನೆ ಮಾಡಲು ಆದೇಶ ಹೊರಡಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆಯ ಸೋಮನಹಳ್ಳಿ ಕಾವಲಿನ ತೋಟಗಾರಿಕೆ ಕ್ಷೇತ್ರದಲ್ಲಿ 2019-20ನೇ ಸಾಲಿನಲ್ಲಿ ಮಹಾವಿದ್ಯಾಲಯ ಸ್ಥಾಪನೆ ಮಾಡಲು ಆದೇಶ ಹೊರಡಿಸಲಾಗಿದೆ. |
| ಆ) | ಹಾಸನ ಜಿಲ್ಲೆಯ ಸೋಮನಹಳ್ಳಿಕಾವಲು ತೋಟಗಾರಿಕೆ ಕ್ಷೇತ್ರದಲ್ಲಿ ಹಾಗೂ ವಿಜಯಪುರ ಜಿಲ್ಲೆಯ ಆಲಮೇಲದಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ವಿಶೇಷಾಧಿಕಾರಿಗಳು ಪ್ರಾದೇಶಿಕ ಕಛೇರಿ, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟ ಜಿ.ಕೆ.ವಿ.ಕೆ. ಆವರಣ, ಬೆಂಗಳೂರು ಇವರು ಪ್ರಾರಂಭಿಸಲು ದಿನಾಂಕ:19.09.2018 ರಂದು ಪ್ರಸ್ತಾವನೆ ನಿಜವೇ; (ಸಂಪೂರ್ಣ ಮಾಹಿತಿ ನೀಡವುದು) | ಹೌದು. |

| | | |
|---|---|---|
| ಇ) | ಹಾಸನ ಜಿಲ್ಲೆಯಲ್ಲಿ ಸೋಮನಹಳ್ಳಿಕಾವಲು ತೋಟಗಾರಿಕೆ ಕ್ಷೇತ್ರದಲ್ಲಿ ಹಾಗೂ ವಿಜಯಪುರ ಜಿಲ್ಲೆಯ ಆಲಮೇಲದಲ್ಲಿ ತೋಟಗಾರಿಕೆ ಮಹಾವಿದ್ಯಾಲಯವನ್ನು ಪ್ರಾರಂಭಿಸಲು ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಇವರ ಪತ್ರ ಸಂಖ್ಯೆ:ಕುಸ/ತೋವಿವುಬಾ/ನೇವಿ-2/ಮ.ವಿ.ಸ್ಥಾ/1316/2018-2325, ದಿನಾಂಕ:29.05.2019ರಲ್ಲಿ ಮಹಾವಿದ್ಯಾಲಯವನ್ನು ಪ್ರಾರಂಭಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ಹೌದು ನಿಜವಿರುತ್ತದೆ. |
| ಈ) | ಹಾಸನ ಜಿಲ್ಲೆಯ ಸೋಮನಹಳ್ಳಿಕಾವಲು ತೋಟಗಾರಿಕೆ ಕ್ಷೇತ್ರದಲ್ಲಿ ಹಾಗೂ ವಿಜಯಪುರ ಜಿಲ್ಲೆಯ ಆಲಮೇಲದಲ್ಲಿ ತೋಟಗಾರಿಕಾ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ತೋಟಗಾರಿಕೆಯ ನಿರ್ದೇಶಕರ ಪತ್ರ ಸಂಖ್ಯೆ:ತೋಇ/ಯೋ/ಸತೋ1-1/5/2019-20, ದಿ:31.05.2019 ರಂದು ಮಹಾವಿದ್ಯಾಲಯವನ್ನು ಪ್ರಾರಂಭಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವುದು ನಿಜವೇ; | ಹಾಸನ ಜಿಲ್ಲೆಯ ಸೋಮನಹಳ್ಳಿಕಾವಲು ತೋಟಗಾರಿಕೆ ಕ್ಷೇತ್ರದಲ್ಲಿ ಹಾಗೂ ವಿಜಯಪುರ ಜಿಲ್ಲೆಯ ಆಲಮೇಲದಲ್ಲಿ ತೋಟಗಾರಿಕಾ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ತೋಟಗಾರಿಕೆಯ ನಿರ್ದೇಶಕರ ಪತ್ರ ಸಂಖ್ಯೆ:ತೋಇ/ಯೋ/ಸತೋ1-1/5/2019-20, ದಿ:31.05.2019 ರಂದು ಮಹಾವಿದ್ಯಾಲಯವನ್ನು ಪ್ರಾರಂಭಿಸುವ ಪ್ರಸ್ತಾವನೆ ನಿಜವಿರುತ್ತದೆ. |
| ಉ) | ಹಾಸನ ಜಿಲ್ಲೆಯ ತೋಟಗಾರಿಕೆ ಬೆಳೆಗಾರರ ಹಿತದೃಷ್ಟಿಯಿಂದ ಹಾಸನ ಜಿಲ್ಲೆ ಸೋಮನಹಳ್ಳಿಕಾವಲಿನ ತೋಟಗಾರಿಕೆ ಕ್ಷೇತ್ರದಲ್ಲಿ ಸುಮಾರು 370 ಎಕರೆ ಪ್ರದೇಶದಲ್ಲಿ ಹೊಸದಾಗಿ 2019-20ನೇ ಸಾಲಿನಲ್ಲಿ ತೋಟಗಾರಿಕೆ ಮಹಾವಿದ್ಯಾಲಯ ಸ್ಥಾಪನೆಗೆ ಹಾಗೂ ವಿಜಯಪುರ ಜಿಲ್ಲೆಯ ಆಲಮೇಲದಲ್ಲಿ ತೋಟಗಾರಿಕಾ ಮಹಾವಿದ್ಯಾಲಯ ಸ್ಥಾಪನೆಗೆ ರೈತ ಸಮುದಾಯ ಮತ್ತು ಸಾರ್ವಜನಿಕರ ಹಾಗೂ ತೋಟಗಾರಿಕೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ತೋಟಗಾರಿಕೆ ಕ್ಷೇತ್ರದ ಸಮಗ್ರ ಅಭಿವೃದ್ಧಿಗಾಗಿ ಉತ್ತೇಜನವನ್ನು ನೀಡುವ ಸಲುವಾಗಿ, ಪ್ರಸ್ತುತ ಸಾಲಿನಿಂದಲೇ ಹಾಸನ ಜಿಲ್ಲೆಯ ಸೋಮನಹಳ್ಳಿಕಾವಲು ಮತ್ತು ವಿಜಯಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಆಲಮೇಲದಲ್ಲಿ ಪ್ರಸ್ತುತ ಲಭ್ಯವಿರುವ ಸಿಬ್ಬಂದಿಗಳು ಹಾಗೂ | ಹಾಸನ ಜಿಲ್ಲೆಯ ಸೋಮನಹಳ್ಳಿಕಾವಲು ಮತ್ತು ವಿಜಯಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಆಲಮೇಲದಲ್ಲಿಪ್ರಸ್ತುತ ಲಭ್ಯವಿರುವ ಸಿಬ್ಬಂದಿಗಳು ಹಾಗೂ ಮೂಲಸೌಲಭ್ಯಗಳೊಂದಿಗೆ ಒಟ್ಟು 2 ತೋಟಗಾರಿಕೆ ಮಹಾವಿದ್ಯಾಲಯಗಳನ್ನು ಸ್ಥಾಪಿಸಲು ಈಗಾಗಲೇ ಸರ್ಕಾರಿ ಆದೇಶ ಸಂಖ್ಯೆ: |

| | | |
|---|---|---|
| | ಮೂಲಸೌಲಭ್ಯಗಳೊಂದಿಗೆ ತಲಾ ರೂ.84.00 ಕೋಟಿಗಳಂತೆ ಒಟ್ಟು ಒಟ್ಟು ರೂ.168.00 ಕೋಟಿಗಳ ಅನುದಾನದಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಲು ಅನುಮೋದನೆ ನೀಡಿ, ಸರ್ಕಾರಿ ಆದೇಶ ಸಂಖ್ಯೆ:ತೋಇ 240 ತೋಇವಿ 2018 ಬೆಂಗಳೂರು, ದಿ.18.07.2019ರಲ್ಲಿ ಹೊರಡಿಸಿರುವುದು ನಿಜವೇ;(ಸಂಪೂರ್ಣ ಮಾಹಿತಿ ನೀಡುವುದು) | ತೋಇ 240 ತೋಇವಿ 2018, ಬೆಂಗಳೂರು, ದಿನಾಂಕ:18.07.2019ರನ್ವಯ ಅನುಮೋದನೆ ನೀಡಲಾಗಿರುತ್ತದೆ.<br><br>ಮುಂದುವರೆದು ಪ್ರಸ್ತಾಪಿತ ತೋಟಗಾರಿಕೆ ಮಹಾ ವಿದ್ಯಾಲಯಗಳ ಸ್ಥಾಪನೆಗೆ ಅನುದಾನ ನಿಗದಿಯಾಗಿರುವುದಿಲ್ಲ. |
| ಊ) | ಈಗಾಗಲೇ ಹಾಸನದ ಲೋಕೋಪಯೋಗಿ ಇಲಾಖೆಯು ರೂ.63.00 ಕೋಟಿಗಳಿಗೆ ಅಂದಾಜು ಪಟ್ಟಿ ತಯಾರು ಮಾಡಿ, ತಾಂತ್ರಿಕ ಮಂಡಳಿ ಅನುಮೋದನೆಯೊಂದಿಗೆ ಆಡಳಿತಾತ್ಮಕ ಅನುಮೋದನೆಗೆ ಸರಕಾರದ ಪ್ರಧಾನ ಕಾರ್ಯದರ್ಶಿಗಳು, ತೋಟಗಾರಿಕೆ ಇಲಾಖೆ ಇವರಿಗೆ ಕಳುಹಿಸಿರುವುದು ನಿಜವೆ;ಹಾಗಿದ್ದಲ್ಲಿ ಯಾವಾಗ ಅನುಮೋದನೆ ನೀಡಲಾಗುವುದು ಹಾಗೂ 2020-21ನೇ ಸಾಲಿನಿಂದ ಹಾಸನ ಜಿಲ್ಲೆ ಸೋಮನಹಳ್ಳಿ ಕಾವಲಿನ ತೋಟಗಾರಿಕಾ ಕ್ಷೇತ್ರದಲ್ಲಿ ಮತ್ತು ವಿಜಯಪುರ ಜಿಲ್ಲೆಯ ಸಿಂಧಗಿ ತಾಲ್ಲೂಕಿನ ಆಲಮೇಲದಲ್ಲಿ ತೋಟಗಾರಿಕಾ ಮಹಾವಿದ್ಯಾಲಯ ಸ್ಥಾಪನೆಗೆ ಸರ್ಕಾರ ಕ್ರಮ ಕೈಗೊಳ್ಳುವ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು? | |

ಸಂಖ್ಯೆ: HORTI 28 HGM 2021

(ಆರ್.ಶಂಕರ್)

ತೋಟಗಾರಿಕೆ ಮತ್ತು ರೇಷ್ಮೆ ಸಚಿವರು





LAQ-117

79

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ:- ಹಾಸನ ಜಿಲ್ಲೆಯ ಸೋಮನಹಳ್ಳಿ ಕಾವಲ್ ತೋಟಗಾರಿಕೆ ಕ್ಷೇತ್ರದಲ್ಲಿ ಮತ್ತು ವಿಜಯಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಆಲಮೇಲದಲ್ಲಿ ತೋಟಗಾರಿಕೆ ಮಹಾವಿದ್ಯಾಲಯಗಳನ್ನು ಸ್ಥಾಪಿಸುವ ಕುರಿತು.

ಉಲ್ಲೇಖ:- 1) ವಿಶೇಷಾಧಿಕಾರಿಗಳು, ಪ್ರಾದೇಶಿಕ ಕಛೇರಿ, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ, ಜಿ.ಕೆ.ವಿ.ಕೆ.ಆವರಣ, ಬೆಂಗಳೂರು ಇವರ ಪ್ರಸ್ತಾವನೆ ದಿನಾಂಕ 19-09-2018.

2) ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ, ಇವರ ಪತ್ರಸಂ;ಕುಸ/ತೋವಿವಿಬಾ/ನೇವಿ-2/ಮ.ವಿ.ಸ್ಥಾ/1316/2018-2325, ದಿನಾಂಕ;21-11-2018 ಮತ್ತು ದಿನಾಂಕ 29-05-2019.

3) ತೋಟಗಾರಿಕೆ ನಿರ್ದೇಶಕರ ಪತ್ರ ಸಂ;ತೋಇ/ಯೋ/ಸತೋ1-1/5/2019-20, ದಿನಾಂಕ 31-05-2019.

******

ಮೇಲೆ ಓದಲಾದ (1)ರ ವಿಶೇಷಾಧಿಕಾರಿಗಳು, ಪ್ರಾದೇಶಿಕ ಕಛೇರಿ, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ, ಜಿ.ಕೆ.ವಿ.ಕೆ.ಆವರಣ, ಬೆಂಗಳೂರು ಇವರ ಪ್ರಸ್ತಾವನೆಯಲ್ಲಿ ಹಾಸನ ಜಿಲ್ಲೆಯ ಸೋಮನಹಳ್ಳಿ ಕಾವಲ್ ತೋಟಗಾರಿಕೆ ಕ್ಷೇತ್ರದಲ್ಲಿ ಮತ್ತು ವಿಜಯಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಆಲಮೇಲದಲ್ಲಿ ತೋಟಗಾರಿಕೆ ಮಹಾವಿದ್ಯಾಲಯಗಳನ್ನು ಸ್ಥಾಪಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ದೇಶೀಯ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ತೋಟಗಾರಿಕೆ ಉತ್ಪನ್ನಗಳಿಗೆ ಹೆಚ್ಚಿನ ಬೇಡಿಕೆ ಇರುವುದರಿಂದ ಇತ್ತೀಚಿನ ದಿನಗಳಲ್ಲಿ ತೋಟಗಾರಿಕೆ ಬೆಳೆಗಳು ಬಹಳ ಮುಖ್ಯವಾಗುತ್ತಿವೆ. ಈ ತೋಟಗಾರಿಕೆ ಉತ್ಪನ್ನಗಳು ಜೀವಸತ್ವಗಳು, ಖನಿಜಗಳು, ಫೋಟೋಕೆಮಿಕಲ್ಸ್, ಬಯೋಫ್ಲೋಟಾನ್ನಗಳು ಮತ್ತು ಉತ್ಕರ್ಷಣ ನಿರೋಧಕಗಳ ಜೀವಾಳವಾಗಿರುವುದರಿಂದ ತೋಟಗಾರಿಕೆ ಬೆಳೆಗಳನ್ನು ಬೆಳೆಸುವ ಮೂಲಕ ರೈತರಿಗೆ ಮಾತ್ರವಲ್ಲದೆ, ತೋಟಗಾರಿಕೆ ಉತ್ಪನ್ನಗಳ ಉತ್ಪಾದನೆಯು ಆರೋಗ್ಯ ಪ್ರಜ್ಞೆಯ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸುತ್ತದೆ. ಇದು ಮಾನವನ ಸಮಗ್ರ ಆರೋಗ್ಯ ಪೋಷಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ರಾಜ್ಯದ ತೋಟಗಾರಿಕಾ ತಜ್ಞರ ಪ್ರಸ್ತುತ ಬೇಡಿಕೆಯನ್ನು ಪೂರೈಸಲು, ಬಹುಶಃ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ಎಂಟು ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಅಲ್ಪ ಪ್ರಮಾಣದಲ್ಲಿ ಪೂರೈಕೆಯಾಗುವುದರಿಂದ

3120

......2

JD (Plng)

AHO-1 21/8/5

78



ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿನ ಅಭಿವೃದ್ಧಿ ಯೋಜನೆಗಳನ್ನು ನಿರ್ವಹಿಸಲು ರಾಜ್ಯದಲ್ಲಿ ತೋಟಗಾರಿಕೆ ಕಾಲೇಜುಗಳನ್ನು ಸ್ಥಾಪಿಸುವ ಅವಶ್ಯಕತೆಯಿದೆ.

ಹಾಸನ ಜಿಲ್ಲೆಯಲ್ಲಿ ತೋಟಗಾರಿಕೆ ಬೆಳೆಗಳ ಒಟ್ಟು ವಿಸ್ತೀರ್ಣ 1,33,360 ಹೆಕ್ಟೇರ್ ಆಗಿದ್ದು, ಪ್ರಮುಖವಾಗಿ ತೋಟಗಾರಿಕೆ ಬೆಳೆಗಳಾದ ತೆಂಗಿನಕಾಯಿ, ಕಾಫಿ, ಮೆಣಸು, ಏಲಕ್ಕಿ, ಅಡಕೆ, ಶುಂಠಿ, ಅರಿಶಿನ, ಪ್ರಮುಖ ಹಣ್ಣಿನ ಬೆಳೆಗಳಾದ ಮಾವು, ಬಾಳೆಹಣ್ಣು, ಸಪೋಟಾ, ಪೇರಲ ಮತ್ತು ಪಪ್ಪಾಯ, ತರಕಾರಿ ಬೆಳೆಗಳಾದ ಆಲೂಗಡ್ಡೆ, ಶುಂಠಿ, ಟೊಮೆಟೊ, ಹಸಿರು ಮೆಣಸಿನಕಾಯಿ, ಬೀನ್ಸ್, ಸಿಹಿ ಆಲೂಗಡ್ಡೆ ಮತ್ತು ಈರುಳ್ಳಿ ಬೆಳೆಗಳನ್ನು ಬೆಳೆಯಲಾಗುತ್ತಿದೆ. ಹಾಸನ ಜಿಲ್ಲೆಯಲ್ಲಿ ಉತ್ತಮ ಹವಾಮಾನ ಪರಿಸ್ಥಿತಿ ಮತ್ತು ವರ್ಷವಿಡೀ ಸಮಾನವಾಗಿ ಬೀಳುವ ಮಳೆಯು ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ಪೂರಕ ವಾತಾವರಣ ಕಲ್ಪಿಸಿದ್ದು ಇದರಿಂದಾಗಿ ರಫ್ತು ಮಾಡಬಹುದಾದ ಬೆಳೆಗಳನ್ನು ಉತ್ಪಾದಿಸಬಹುದಾಗಿದೆ.

ಸೋಮನಹಳ್ಳಿ ಕಾವಲ್ ನಲ್ಲಿ ಈಗಾಗಲೇ ತೋಟಗಾರಿಕೆ ಕ್ಷೇತ್ರವಿದ್ದು, ಇದು ಪೂರ್ವ ಭಾಗದ ಹಾಸನ ನಗರದಿಂದ 17 ಕಿ.ಮೀ ದೂರದಲ್ಲಿದ್ದು, ಉತ್ತಮ ಮಣ್ಣು ಮತ್ತು ನೀರಾವರಿ ಸೌಲಭ್ಯಗಳೊಂದಿಗೆ 400 ಎಕರೆ ಭೂಮಿಯನ್ನು ಹೊಂದಿದೆ. ಈಗಾಗಲೇ ತೋಟಗಾರಿಕಾ ಸಂಶೋಧನಾ ಕೇಂದ್ರವನ್ನು ಸೋಮನಹಳ್ಳಿ ಕಾವಲ್ ಹಾಸನ ಜಿಲ್ಲೆ, ಇಲ್ಲಿನ 50 ಎಕರೆ ಪ್ರದೇಶದಲ್ಲಿ 2012ರ ಅವಧಿಯಲ್ಲಿ ತೋಟಗಾರಿಕಾ ವಿಜ್ಞಾನ ವಿಶ್ವವಿದ್ಯಾಲಯ, ಬಾಗಲಕೋಟದ ಅಡಿಯಲ್ಲಿ ಸ್ಥಾಪಿಸಲಾಗಿದೆ ಮತ್ತು ಕೃಷಿ ಸಮುದಾಯದ ಅನುಕೂಲಕ್ಕಾಗಿ ಈ ಸಂಶೋಧನಾ ಕೇಂದ್ರದಿಂದ ಸಾಕಷ್ಟು ತಂತ್ರಜ್ಞಾನಗಳನ್ನು ವಿಕಸಿಸಲಾಗಿದೆ. ಮೇಲಿನ ಮೂಲಸೌಕರ್ಯ ಸೌಲಭ್ಯಗಳೊಂದಿಗೆ, ಹಾಸನ ಜಿಲ್ಲೆಯಲ್ಲಿ ಹೊಸ ತೋಟಗಾರಿಕೆ ಕಾಲೇಜು ಸ್ಥಾಪಿಸಲು ಸಾಕಷ್ಟು ಅವಕಾಶವಿದೆ ಮತ್ತು ಸಂಶೋಧನೆ, ವಿಸ್ತರಣೆ ಮತ್ತು ಬೋಧನೆಯ ಮೂಲಕ ತಂತ್ರಜ್ಞಾನದ ವರ್ಗಾವಣೆಗೆ ಇದು ಸಹಾಯಕವಾಗಲಿದೆ

ಅದೇ ರೀತಿ ವಿಜಯಪುರ ಜಿಲ್ಲೆಯಲ್ಲಿ ದ್ರಾಕ್ಷಿ, ದಾಳಿಂಬೆ, ಲಿಂಬೆ, ಬಾಳೆಹಣ್ಣು, ಸೀತಾಫಲ, ಕಿತ್ತಳೆಹಣ್ಣು ಮತ್ತು ಇನ್ನಿತರ ತರಕಾರಿ ಬೆಳೆಗಳನ್ನು ಬೆಳೆಯಲಾಗುತ್ತಿದೆ. ವಿಜಯಪುರ ಜಿಲ್ಲೆಯಲ್ಲಿ ತೆರೆದ ಬಾವಿಗಳು, ಬೋರ್ ವೆಲ್ ಗಳು, ಕೆರೆಗಳು ಮತ್ತು ಕೃಷ್ಣಾ ಮತ್ತು ಭೀಮಾ ನದಿಗಳು ಇದ್ದು, ಕರ್ನಾಟಕ ಸರ್ಕಾರವು ಹಲವು ನೀರಾವರಿ ಯೋಜನೆಗಳನ್ನು ಕೈಗೆತ್ತಿಗೊಂಡಿದ್ದು ಅವುಗಳು ಮುಕ್ತಾಯ ಹಂತದಲ್ಲಿದ್ದು, ಇವು ತೋಟಗಾರಿಕೆ ಬೆಳೆಗಳಿಗೆ ಉತ್ತಮ ವಾತಾವರಣ ಕಲ್ಪಿಸುತ್ತವೆ. ವಿಜಯಪುರದ ಸಿಂದಗಿ ತಾಲ್ಲೂಕಿನ

. . .3

ಆಲಮೇಲದಲ್ಲಿ ತೋಟಗಾರಿಕೆ ಮಹಾವಿದ್ಯಾಲಯವನ್ನು ಸ್ಥಾಪಿಸಲು ಉದ್ದೇಶಿಸಲಾಗಿದ್ದು, ಈ ಪ್ರದೇಶವು ರಾಜ್ಯದ ವಿವಿಧ ಪ್ರದೇಶಗಳಿಂದ ಉತ್ತಮ ಸಂಪರ್ಕ ವ್ಯವಸ್ಥೆ ಹೊಂದಿರುತ್ತದೆ.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ (2) ರ ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ, ಮತ್ತು (3) ರ ತೋಟಗಾರಿಕೆ ನಿರ್ದೇಶಕರು ಇವರ ಪತ್ರಗಳಲ್ಲಿ ಹಾಸನ ಹಾಗೂ ವಿಜಯಪುರ ಜಿಲ್ಲೆಗಳ ವ್ಯಾಪ್ತಿಯಲ್ಲಿನ ರೈತ ಸಮುದಾಯ ಹಾಗೂ ಸಾರ್ವಜನಿಕರು, ತೋಟಗಾರಿಕೆ ಸಂಶೋಧನಾ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮತ್ತು ತೋಟಗಾರಿಕೆ ಕ್ಷೇತ್ರದ ಸಮಗ್ರ ಅಭಿವೃದ್ಧಿಗಾಗಿ ಉತ್ತೇಜನವನ್ನು ನೀಡಲು ಹಾಸನ ಹಾಗೂ ವಿಜಯಪುರ ಜಿಲ್ಲೆಗಳಲ್ಲಿ ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನ (ಐಸಿಎಆರ್) ನಿಯಮಗಳ ಪ್ರಕಾರ ಸದರಿ ತೋಟಗಾರಿಕೆ ಮಹಾವಿದ್ಯಾಲಯಗಳನ್ನು ಸ್ಥಾಪಿಸಲು ಅವಶ್ಯಕವಿರುವ ಜಮೀನು, ಮೂಲಭೂತ ಸೌಕರ್ಯಗಳು, ಸಿಬ್ಬಂದಿ ಹಾಗೂ ಪ್ರತಿ ಮಹಾವಿದ್ಯಾಲಯಕ್ಕೆ ತಲಾ ರೂ.84.00 ಕೋಟಿಗಳ ಅನುದಾನದಂತೆ ಒಟ್ಟು 168.00 ಕೋಟಿಗಳ ಅನುದಾನವನ್ನು ಸರ್ಕಾರದಿಂದ ಒದಗಿಸಿದಲ್ಲಿ ಹಾಸನ ಜಿಲ್ಲೆಯ ಸೋಮನಹಳ್ಳಿ ಕಾವಲ್ ತೋಟಗಾರಿಕೆ ಕ್ಷೇತ್ರದಲ್ಲಿ ಮತ್ತು ವಿಜಯಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಆಲಮೇಲದಲ್ಲಿ ತೋಟಗಾರಿಕೆ ಮಹಾವಿದ್ಯಾಲಯಗಳನ್ನು ಸ್ಥಾಪಿಸುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ಕುಲಸಚಿವರು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಮತ್ತು ತೋಟಗಾರಿಕೆ ನಿರ್ದೇಶಕರು ಹಾಗೂ ಈ ಭಾಗಗಳ ವಿವಿಧ ಕೃಷಿ ಪರ ಸಂಘಟನೆಗಳ ಒತ್ತಾಯದ ಹಿನ್ನೆಲೆಯಲ್ಲಿ, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಹಾಸನ ಹಾಗೂ ವಿಜಯಪುರ ಜಿಲ್ಲೆಗಳ ವ್ಯಾಪ್ತಿಯಲ್ಲಿನ ರೈತ ಸಮುದಾಯದ ಹಾಗೂ ಸಾರ್ವಜನಿಕರ, ತೋಟಗಾರಿಕೆ ಸಂಶೋಧನಾ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮತ್ತು ತೋಟಗಾರಿಕೆ ಕ್ಷೇತ್ರದ ಸಮಗ್ರ ಅಭಿವೃದ್ಧಿಗಾಗಿ ಉತ್ತೇಜನವನ್ನು ನೀಡುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ತೋಇ 240 ತೋಇವಿ 2018,**
**ಬೆಂಗಳೂರು, ದಿನಾಂಕ 18-07-2019.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಹಾಸನ ಹಾಗೂ ವಿಜಯಪುರ ಜಿಲ್ಲೆಗಳ ವ್ಯಾಪ್ತಿಯಲ್ಲಿನ ರೈತ ಸಮುದಾಯದ ಹಾಗೂ ಸಾರ್ವಜನಿಕರ, ತೋಟಗಾರಿಕೆ ಸಂಶೋಧನಾ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮತ್ತು ತೋಟಗಾರಿಕೆ ಕ್ಷೇತ್ರದ ಸಮಗ್ರ ಅಭಿವೃದ್ಧಿಗಾಗಿ ಉತ್ತೇಜನವನ್ನು ನೀಡುವ

....4

76



ಸಲುವಾಗಿ ಸರ್ಕಾರವು ಹಾಸನ ಜಿಲ್ಲೆಯ ಸೋಮನಹಳ್ಳಿ ಕಾವಲ್ ತೋಟಗಾರಿಕೆ ಕ್ಷೇತ್ರದಲ್ಲಿ ಮತ್ತು ವಿಜಯಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಆಲಮೇಲದಲ್ಲಿ ತೋಟಗಾರಿಕೆ ಮಹಾವಿದ್ಯಾಲಗಳನ್ನು ಲಭ್ಯವಿರುವ ಸಿಬ್ಬಂದಿ ಹಾಗೂ ಮೂಲಭೂತ ಸೌಕರ್ಯಗಳೊಂದಿಗೆ ಪ್ರಸ್ತುತ ಸಾಲಿನಿಂದಲೇ ಪ್ರಾರಂಭಿಸಲು ಅನುಮತಿಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು,1977ರ 17ನೇ ನಿಯಮದ (2)ನೇ ಉಪ ನಿಯಮದ ಪರಂತುಕದ ವ್ಯಾಪ್ತಿಯೊಳಗೆ ಬರುತ್ತದೆ ಮತ್ತು ಆದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

Am 18/12/13
(ಅಮರೇಶ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:

O/C

1) ಪ್ರಧಾನ ಮಹಾಲೇಖಪಾಲರು, (ಜಿ ಮತ್ತು ಎಸ್.ಎಸ್.ಎ)/(ಇ ಮತ್ತು ಆರ್.ಎಸ್.ಎ) & (ಎ ಮತ್ತು ಇ) ಕರ್ನಾಟಕ, ಬೆಂಗಳೂರು.
2) ಮಾನ್ಯ ರಾಜ್ಯಪಾಲರ ಪ್ರಧಾನ ಕಾರ್ಯದರ್ಶಿಗಳು, ರಾಜಭವನ, ಬೆಂಗಳೂರು-01.
3) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು-01.
4) ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ನವನಗರ, ಬಾಗಲಕೋಟೆ.
5) ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-04.
6) ವಿಶೇಷಾಧಿಕಾರಿಗಳು, ಪ್ರಾದೇಶಿಕ ಕಛೇರಿ, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆ ಆವರಣ, ಜಿ.ಕೆ.ವಿ.ಕೆ, ಬೆಂಗಳೂರು.
7) ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ(ಸಚಿವ ಸಂಪುಟ ಶಾಖೆ), ವಿಧಾನಸೌಧ, ಬೆಂಗಳೂರು.
8) ಮಾನ್ಯ ತೋಟಗಾರಿಕೆ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
9) ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ತೋಟಗಾರಿಕೆ ಇಲಾಖೆ.
10) ಶಾಖಾಧಿಕಾರಿ, ಸ್ವೀಕೃತಿ ಮತ್ತು ರವಾನೆ, ತೋಟಗಾರಿಕೆ ಇಲಾಖೆ.

******

ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 06 ಎಲ್ಎಕ್ಯೂ 2021.

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29/01/2021.

ಇವರಿಂದ
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

4/1 104 29/01/21

ಇವರಿಗೆ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಸೋಮಲಿಂಗಪ್ಪ ಎಂ ಎಸ್ (ಸಿರಗುಪ್ಪ) ರವರ ಪ್ರಶ್ನೆ ಸಂಖ್ಯೆ 59 ಕ್ಕೆ ಉತ್ತರಿಸುವ ಬಗ್ಗೆ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಸೋಮಲಿಂಗಪ್ಪ ಎಂ ಎಸ್ (ಸಿರಗುಪ್ಪ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 59 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಹಾಗೂ Soft Copy ಯನ್ನು email ID: questionskla@karnataka.gov.in ಇಲ್ಲಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

A Vijayakumar 29.01.2021

(ಎ ವಿಜಯ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಎಂಎ-1&3)



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 59 |
| ಸದಸ್ಯರ ಹೆಸರು | : | ಶ್ರೀ ಸೋಮಲಿಂಗಪ್ಪ ಎಂ.ಎಸ್. (ಸಿರುಗುಪ್ಪ) |
| ಉತ್ತರಿಸುವ ದಿನಾಂಕ | : | 29/01/2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸಿರುಗುಪ್ಪ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ "ಶಿರಿಗೇರಿ ಗ್ರಾಮ ಪಂಚಾಯಿತಿ"ಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಶಿರಿಗೇರಿ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಸರ್ಕಾರದ ಮುಂದೆ ಪ್ರಸ್ತಾವನೆ ಇರುವುದಿಲ್ಲ. |
| (ಆ) | ಹಾಗಿದ್ದಲ್ಲಿ, "ಶಿರಿಗೇರಿ ಗ್ರಾಮ ಪಂಚಾಯಿತಿ"ಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಿ ಘೋಷಣೆ ಮಾಡಲು ಇರುವ ಅಡತಡೆಗಳೇನು? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ |
| (ಇ) | ಡಿಸೆಂಬರ್-2020 ರಲ್ಲಿ ನಡೆದ ಗ್ರಾಮ ಪಂಚಾಯಿತಿ ಚುನಾವಣೆ ಸಂದರ್ಭದಲ್ಲಿ "ಶಿರಿಗೇರಿ ಗ್ರಾಮಸ್ಥರು" ಗ್ರಾಮ ಪಂಚಾಯಿತಿ ಚುನಾವಣೆಯನ್ನು ಬಹಿಷ್ಕರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಈ) | ಹಾಗಿದ್ದಲ್ಲಿ, ಶಿರಿಗೇರಿ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಿ ಯಾವಾಗ ಚುನಾವಣೆ ಘೋಷಣೆ ಮಾಡಲಾಗುತ್ತದೆ. (ವಿವರ ನೀಡುವುದು) | ಶಿರಿಗೇರಿ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಸೂಕ್ತ ಹಾಗೂ ಅರ್ಹ ಪ್ರಸ್ತಾವನೆ ಸ್ವೀಕೃತವಾದಲ್ಲಿ ನಿಯಮಾನುಸಾರ ಕ್ರಮವಹಿಸಲಾಗುವುದು. |

**ಸಂಖ್ಯೆ: ನಅಇ 06 ಎಲ್‌ಎಕ್ಯೂ 2021**

(ಎನ್. ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ ಸಿಐ 31 ಎಂಎಂಎನ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
1ನೇ ಮಹಡಿ, ವಿಕಾಸಸೌಧ,
ಬೆಂಗಳೂರು, ದಿನಾಂಕ 29.01.2021

13
29/01/21

ಇಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
(ಎಂ.ಎಸ್.ಎಂ.ಇ., ಜವಳಿ ಮತ್ತು ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ

ಮಾನ್ಯರೇ,

ವಿಷಯ : ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪೂರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 218ಕ್ಕೆ ಉತ್ತರ ಒದಗಿಸುವ ಕುರಿತು.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.218/2021, ದಿನಾಂಕ 21.01.2021.

-----

ಪ್ರಸ್ತಾಪಿತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪೂರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 218ಕ್ಕೆ ಸರ್ಕಾರದ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

(ಶಿವಪ್ರಕಾಶ)
ಪೀಠಾಧಿಕಾರಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪ್ರತಿ:-

1. ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
3. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
4. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ



ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 218 |
| ಸದಸ್ಯರ ಹೆಸರು | ಶ್ರೀ ಬಂಡೆಪ್ಪ ಖಾಶೆಂಪುರ್ |
| ಉತ್ತರಿಸಬೇಕಾದ ದಿನಾಂಕ | 29.01.2021. |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಕೆಂಪು ಕಲ್ಲು ಗಣಿಗಾರಿಕೆ ನಡೆಯುತ್ತಿದ್ದು, ಅದನ್ನು ಕಟ್ಟಡಗಳ ನಿರ್ಮಾಣಕ್ಕೆ ಉಪಯೋಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ, ಕೆಂಪು ಕಲ್ಲುಗಣಿಗಾರಿಕೆ ಮಾಡುತ್ತಿರುವವರು ಸರ್ಕಾರದಿಂದ ಪರವಾನಗಿಯನ್ನು ಪಡೆದಿದ್ದಾರೆಯೇ; | ಬೀದರ್ ಜಿಲ್ಲಾ ವ್ಯಾಪ್ತಿಯಲ್ಲಿ ಕೆಂಪು ಕಲ್ಲು ತೆಗೆಯಲು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2020ರ ನಿಯಮ 3-A(b) ರಂತೆ ಒಟ್ಟು 03 ಪ್ರಕರಣಗಳಲ್ಲಿ ಕಾರ್ಯಾನುಮತಿ ನೀಡಲಾಗಿರುತ್ತದೆ. |
| ಇ) | ಹಾಗಿದ್ದಲ್ಲಿ, ಕೆಂಪು ಕಲ್ಲುಗಣಿಗಾರಿಕೆ ಪರವಾನಿಗೆಯನ್ನು ಪಡೆಯಲು ಇರುವ ಮಾನದಂಡಗಳೇನು, ಹಾಗೂ ಸರ್ಕಾರ ಗಣಿಗಾರಿಕೆ ಮಾಡಲು ಪರವಾನಗಿಯನ್ನು ನೀಡುತ್ತದಯೇ; | ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 3-A(b) ರಂತೆ ಪಟ್ಟಾ ಜಮೀನುಗಳನ್ನು ವ್ಯವಸಾಯ ಯೋಗ್ಯ ಜಮೀನನ್ನಾಗಿ ಪರಿವರ್ತಿಸಿಕೊಳ್ಳಲು, ಸದರಿ ಜಮೀನಿನಲ್ಲಿ ಇರುವ ಕೆಂಪು ಕಲ್ಲನ್ನು (Laterite) ತೆಗೆಯಲು ಅನುಮತಿ ನೀಡಲಾಗುತ್ತದೆ.<br><br>ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 3-A(b) ರಡಿ ಪಟ್ಟಾದಾರನು ಅನುಮತಿ ಪಡೆಯಲು ಇಚ್ಛಿಸಿದಲ್ಲಿ ಕೃಷಿ ಅಧಿಕಾರಿಗಳಿಂದ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಿದ ನಂತರ ಜಿಲ್ಲಾ ಗಣಿ ಮತ್ತು ಭೂವಿಜ್ಞಾನ ಇಲಾಖೆ ಕಛೇರಿಗಳಲ್ಲಿ ಕೆಂಪು ಕಲ್ಲು ತೆಗೆಯಲು ಅನುಮತಿ ನೀಡಲಾಗುವುದು.<br><br>ಸರ್ಕಾರಿ ಜಮೀನುಗಳಲ್ಲಿ ಲಭ್ಯವಿರುವ ಕೆಂಪು ಕಲ್ಲು ನಿಕ್ಷೇಪವನ್ನು ತೆಗೆಯಲು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 31-C ರಂತೆ ಹರಾಜು ನಡೆಸಿ ಗುತ್ತಿಗೆಗಳನ್ನು ಮಂಜೂರು ಮಾಡಲಾಗುತ್ತದೆ. |
| ಈ) | ಹಾಗದಿದ್ದಲ್ಲಿ ಕೆಂಪು ಕಲ್ಲುಗಣಿಗಾರಿಕೆ ಮಾಡುವವರಿಗೆ ಪರವಾನಿಗೆ ನೀಡಿ ಅದನ್ನು ಕಾನೂನು ವ್ಯಾಪ್ತಿಯಲ್ಲಿ ತರಲು ಕ್ರಮ ಕೈಗೊಳ್ಳಲಾಗುವುದೇ? | ಕಂಡಿಕೆ-(ಇ) ರಲ್ಲಿ ಉತ್ತರಿಸಿದೆ. |

ಸಂಖ್ಯೆ ಸಿಐ 31 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.




ಸಂಖ್ಯೆ: ಸಿಒ 07 ಸಿಸಿಬಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:30.01.2021

115
4/5
29/1/2021

**ಇವರಿಂದ,**

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

**ಇವರಿಗೆ,**

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 48 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 48 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

**ತಮ್ಮ ನಂಬುಗೆಯ,**

Radha H.C
**(ಹೆಚ್.ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 48

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಜಿಲ್ಲಾ ಕೇಂದ್ರ ಸಹಕಾರ ಯೂನಿಯನ್ (ಡಿಸಿಸಿ) ಬ್ಯಾಂಕ್‌ಗಳು ಸಹಕಾರ ಇಲಾಖೆಯ ಅಧೀನದ ಸಂಸ್ಥೆಗಳೇ ಅಥವಾ ಖಾಸಗಿ ಸಂಸ್ಥೆಗಳೇ;<br>(ಮಾಹಿತಿ ನೀಡುವದು) | ಜಿಲ್ಲಾ ಕೇಂದ್ರ ಸಹಕಾರ ಯೂನಿಯನ್ ಮತ್ತು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳು ಕೆಳಗೆ ನೀಡಿರುವ ವಿವರಣೆಗಳಿಗೆ ಒಳಪಟ್ಟು ಸಹಕಾರ ಇಲಾಖೆಯ ಅಧೀನದ ಸಂಸ್ಥೆಗಳೇ ಆಗಿರುತ್ತದೆ.<br><br>ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಹಾಗೂ ನಿಯಮ 1960 ರನ್ವಯ ಕರ್ನಾಟಕ ರಾಜ್ಯಾದಂತ್ಯ ಒಟ್ಟು 29 ಜಿಲ್ಲಾ ಕೇಂದ್ರ ಸಹಕಾರ ಯೂನಿಯನ್‌ಗಳು ಮತ್ತು ಒಟ್ಟು 21 ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ನೋಂದಣಿಯಾಗಿ ಕೆಲಸ ನಿರ್ವಹಿಸುತ್ತಿರುತ್ತವೆ.<br><br>ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಬ್ಯಾಂಕಿಂಗ್ ರೆಗ್ಯೂಲೇಷನ್ ಕಾಯ್ದೆ 1949 ರ ಅವಕಾಶಗಳ ರೀತ್ಯಾ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದಿಂದ ಪರವಾನಗಿ ಪಡೆದಿರುತ್ತವೆ. ಹಾಗಾಗಿ, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಸಹಕಾರ ಸಂಘಗಳ ಕಾಯ್ದೆ ಬ್ಯಾಂಕಿನ ಉಪನಿಯಮಗಳು ಹಾಗೂ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ನಿರ್ದೇಶನಗಳನ್ವಯ ಕೆಲಸ ನಿರ್ವಹಿಸಬೇಕಿರುತ್ತದೆ.<br><br>ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಹೊಂದಿರುವ ಒಟ್ಟು ಷೇರು ಬಂಡವಾಳದ ಶೇಕಡಾ 50 ಕ್ಕೂ ಮೀರಿ ಷೇರು ಬಂಡವಾಳವನ್ನು ಸರ್ಕಾರದಿಂದ ಪಡೆಯದಿದ್ದಲ್ಲಿ ಅಂತಹ ಬ್ಯಾಂಕುಗಳನ್ನು ಸಂಪೂರ್ಣವಾಗಿ ಸಹಕಾರ ಇಲಾಖೆಯ ಅಧೀನ ಸಂಸ್ಥೆಯೆಂದು ಪರಿಗಣಿಸಲು ಅವಕಾಶಗಳಿರುವುದಿಲ್ಲ.<br><br>ಮುಂದುವರೆದು, ರಾಜ್ಯದಲ್ಲಿನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಒಟ್ಟು ಷೇರು ಬಂಡವಾಳದ ಶೇಕಡಾ 50 ಕ್ಕೂ ಮೀರಿ ಸರ್ಕಾರದ ಷೇರು ಬಂಡವಾಳವನ್ನು ಹೊಂದಿರುವುದಿಲ್ಲ. |
| ಆ) | ಡಿಸಿಸಿ ಬ್ಯಾಂಕ್‌ಗಳು ರಾಜ್ಯ ಶಿಷ್ಟಾಚಾರ ಪಾಲಿಸಬೇಕೆ ಅಥವಾ ರಾಜ್ಯ ಶಿಷ್ಟಾಚಾರದ ಅಧೀನದಲ್ಲಿ ಬರುವುದೇ: (ವಿವರ ಒದಗಿಸುವುದು) | ರಾಜ್ಯದಲ್ಲಿನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಹೊಂದಿರುವ ಒಟ್ಟು ಷೇರು ಬಂಡವಾಳದ ಶೇಕಡಾ 50 ಕ್ಕೂ ಮೀರಿ ಸರ್ಕಾರದ ಷೇರು ಬಂಡವಾಳವನ್ನು ಹೊಂದದೆ ಇದ್ದು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ತಮ್ಮ ಸ್ವಂತ ಬಂಡವಾಳದಿಂದ, ಅಪೆಕ್ಸ್ ಬ್ಯಾಂಕ್ ಮತ್ತು ನಬಾರ್ಡ್ ಸಂಸ್ಥೆಗಳಿಂದ ಸಾಲ ಸೌಲಭ್ಯ ಪಡೆದು ಬ್ಯಾಂಕಿಂಗ್ ವ್ಯವಹಾರ ನಡೆಸುತ್ತಿರುವುದರಿಂದ ರಾಜ್ಯದ ಶಿಷ್ಟಾಚಾರ ಪಾಲಿಸುವ ಅಥವಾ ರಾಜ್ಯದ ಶಿಷ್ಟಾಚಾರದ ಅಧೀನಕ್ಕೆ ಒಳಪಡುವ ಅವಶ್ಯಕತೆ ಉದ್ಭವಿಸುವುದಿಲ್ಲ. |

| | | |
|---|---|---|
| ಇ) | ಸಭೆ ಸಮಾರಂಭಗಳನ್ನು ಸಾಲ ಮೇಳಗಳನ್ನು ಏರ್ಪಾಡು ಮಾಡುವಾಗ ಶಿಷ್ಟಾಚಾರ ಪಾಲಿಸಬೇಕೆ ಅಥವಾ ಇಲ್ಲವೇ; | ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಸಭೆ ಸಮಾರಂಭಗಳನ್ನು ಸಾಲ ಮೇಳಗಳನ್ನು ಏರ್ಪಾಡು ಮಾಡುವಾಗ ಶಿಷ್ಟಾಚಾರ ಪಾಲಿಸುವ ಅವಶ್ಯಕತೆ ಇರುವುದಿಲ್ಲ. ಆದರೆ ಸಂಬಂಧಪಟ್ಟ ಬ್ಯಾಂಕುಗಳು ಶಿಷ್ಟಾಚಾರ ಪಾಲಿಸಲು ಯಾವುದೇ ನಿರ್ಬಂಧ ಇರುವುದಿಲ್ಲ. ಇದು ಆಯಾಯ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಚುನಾಯಿತ ಆಡಳಿತ ಮಂಡಳಿಯ ವಿವೇಚನೆಗೆ ಬಿಟ್ಟ ವಿಷಯವಾಗಿರುತ್ತದೆ. |
| ಈ) | ಡಿಸಿಸಿ ಬ್ಯಾಂಕ್‌ಗಳಲ್ಲಿ ಸಾಲ ಮೇಳ ನಡೆಸಿ, ರಾಜಕೀಯ ವೇದಿಕೆಗಳನ್ನಾಗಿ ಮಾಡಿಕೊಳ್ಳುತ್ತಿರುವುದು, ಶಿಷ್ಟಾಚಾರ ಪಾಲಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಇದಕ್ಕೆ ಕಡಿವಾಣ ಹಾಕಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಇಂತಹ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

**ಸಂಖ್ಯೆ: ಸಿಒ 07 ಸಿಸಿಬಿ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು



<u>**ಕರ್ನಾಟಕ ಸರ್ಕಾರ**</u>

ಸಂಖ್ಯೆ: ಐಟಿಬಿಟಿ 05 ಎಲ್ ಸಿ ಎಂ 2021

ಕರ್ನಾಟಕ ಸರ್ಕಾರ ಸಚಿವಾಲಯ
ಕೊಠಡಿ ಸಂಖ್ಯೆ: 504, 5ನೇ ಹಂತ,
5ನೇ ಮಹಡಿ, ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 30.01.2021

35
ULS
29/1/21

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ.

**ಮಾನ್ಯರೆ,**

**ವಿಷಯ:ಕ** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಹ್ಯಾರಿಸ್ ಎಸ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:110ಕ್ಕೆ ಉತ್ತರಿಸುವ ಬಗ್ಗೆ.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಹ್ಯಾರಿಸ್ ಎಸ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:110ಕ್ಕೆ ಸಂಬಂಧಿಸಿದಂತೆ ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ

Shalini K Hegde 30/1/2021
**(ಶಾಲಿನಿ ಕೆ ಹೆಗಡೆ)**
ಸರ್ಕಾರದ ಅಧೀನ ಕಾರ್ಯದರ್ಶಿ,
ವಿದ್ಯುನ್ಮಾನ,ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

30/1/2021

**ಪ್ರತಿ:**
01. ಮಾನ್ಯ ಉಪ ಮುಖ್ಯಮಂತ್ರಿ ಹಾಗೂ ವಿದ್ಯುನ್ಮಾನ, ಮಾತಂ, ಜೈತಂ ಹಾಗೂ ವಿ&ತಂ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ
02. ಸರ್ಕಾರದ ಅಪರ ಮುಖ್ಯಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ವಿದ್ಯುನ್ಮಾನ, ಮಾತಂ, ಜೈತಂ ಹಾಗೂ ವಿತಂ ಇಲಾಖೆ.
03. ನಿರ್ದೇಶಕರು, ವಿದ್ಯುನ್ಮಾನ, ಮಾತಂ, ಜೈತಂ ನಿರ್ದೇಶನಾಲಯ, ಶಾಂತಿನಗರ, ಬೆಂಗಳೂರು.

* * * *

# ಕರ್ನಾಟಕ ವಿಧಾನ ಸಭೆ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | **110** |
| **ಸದಸ್ಯರ ಹೆಸರು** | **ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ)** |
| **ಉತ್ತರಿಸಬೇಕಾದ ದಿನಾಂಕ** | **29.01.2021** |
| **ಉತ್ತರಿಸಬೇಕಾದ ಸಚಿವರು** | **ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ)** |
| **ಪ್ರಶ್ನೆ** | **ಉತ್ತರ** |
| ಅ) ರಾಜ್ಯದಲ್ಲಿ ನವೋದ್ಯಮಗಳ (ಸ್ಟಾರ್ಟ್ ಅಪ್) ಸ್ಥಾಪನೆ ಮತ್ತು ಬೆಳವಣಿಗೆ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು(ಅಂಕಿ ಅಂಶಗಳ ವಿವರ ನೀಡುವುದು);<br><br>ಆ) ನವೋದ್ಯಮಗಳ ಸ್ಥಾಪನೆ ಮತ್ತು ಬೆಳವಣಿಗೆಗಾಗಿ ಸರ್ಕಾರ ಅಗತ್ಯ ಸೌಲಭ್ಯ ಸೌಕರ್ಯಗಳನ್ನು ಸಕಾಲಕ್ಕೆ ಮತ್ತು ಸರಳ ರೀತಿಯಲ್ಲಿ ಒದಗಿಸಿಕೊಡುವಲ್ಲಿ ಕೈಗೊಳ್ಳುತ್ತಿರುವ ಕ್ರಮಗಳು ಯಾವುವು; | ರಾಜ್ಯದಲ್ಲಿ ನವೋದ್ಯಮಗಳ (ಸ್ಟಾರ್ಟ್ಅಪ್) ಸ್ಥಾಪನೆ ಮತ್ತು ಬೆಳವಣಿಗಾಗಿ ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿದೆ. ಐಟಿ, ಬಿಟಿ, ಇಎಸ್‌ಡಿಎಂ, ಮತ್ತಿತರ ವಲಯಗಳಲ್ಲಿ ನಾವೀನ್ಯತೆಯನ್ನು ಪ್ರೋತ್ಸಾಹಿಸಲು ಮತ್ತು ನವೋದ್ಯಮಿಗಳ ಬೆಳವಣಿಗೆಗಾಗಿ ಪರಿಸರ ವ್ಯವಸ್ಥೆಯ ಅನುಕೂಲತೆ ಮಾಡಿಕೊಡಲು ಕರ್ನಾಟಕ ನವೋದ್ಯಮ (Start-up) ನೀತಿಯನ್ನು ರೂಪಿಸಲಾಗಿದೆ. ನವೋದ್ಯಮಿಗಳನ್ನು ಪ್ರೋತ್ಸಾಹಿಸಲು ಹಾಗೂ ಅವುಗಳಿಗೆ ಸಹಾಯ ಮಾಡಲು ಈ ನೀತಿಯನ್ನು 2015 ರಲ್ಲಿ ಜಾರಿಗೆ ತಂದಿದ್ದು, ಈ ಪಾಲಿಸಿಯ ಈ ಕೆಳಕಂಡಂತೆ ಅವಕಾಶ ಕಲ್ಪಿಸಿದೆ.<br>• ಐಡಿಯಾ 2 ಪಿಓಸಿ ಯೋಜನೆಯ ಮೂಲಕ ಆರಂಭಿಕ ಹಂತದ ನವೋದ್ಯಮಿಗಳಿಗೆ ರೂ. 50 ಲಕ್ಷದವರೆಗೆ ಅನುದಾನ ನೀಡಲು ಅವಕಾಶ ಕಲ್ಪಿಸಿದೆ. ಇಲ್ಲಿಯವರೆಗೆ, 489 ಸ್ಟಾರ್ಟ್‌ಅಪ್‌ಗಳನ್ನು ಆಯ್ಕೆ ಮಾಡಿ ರೂ.116 ಕೋಟಿಗಳಷ್ಟು ಆರ್ಥಿಕ ಸಹಾಯ ನೀಡಲಾಗಿದೆ.<br>• ನ್ಯೂ ಏಜ್ ಇನ್‌ಕ್ಯೂಬೇಷನ್ ನೆಟ್‌ವರ್ಕ್ ಮೂಲಕ ಶಿಕ್ಷಣದಲ್ಲಿ ಉದ್ಯಮಶೀಲತೆಗೆ ಉತ್ತೇಜನವಿದೆ.<br>• ಟಿಬಿಐಗಳ ಮೂಲಕ ಸಂಶೋಧನೆ ಅಭಿವೃದ್ಧಿ ಸಂಸ್ಥೆಗಳು ಹಾಗೂ ಕೈಗಾರಿಕೆಗಳೊಂದಿಗೆ ಪಾಲುದಾರಿಕೆಯಿದೆ.<br>• ಸಾಮಾಜಿಕ ಪ್ರಭಾವಕ್ಕಾಗಿ ನಾವೀನ್ಯತೆಯನ್ನು ಉತ್ತೇಜಿಸಲು /ಪರಿಹಾರ ಕಂಡುಕೊಳ್ಳಲು ಸ್ಟಾರ್ಟ್ ಅಪ್ ಗಳಿಗೆ Grand Challenge ಯಡಿಯಲ್ಲಿ ಅನುದಾನಕ್ಕೆ ಅವಕಾಶವಿದೆ.<br>• ಕಾರ್ಯಾಗಾರಗಳ ಮೂಲಕ ಸಾಮರ್ಥ್ಯ ನಿರ್ಮಾಣ, ಇತ್ಯಾದಿಗಳಿಗೆ ಉತ್ತೇಜನವಿದೆ.<br>• ರಿಯಾಯಿತಿ ಹಾಗೂ ವಿನಾಯಿತಿಗಳ ಮೂಲಕ ರಾಜ್ಯ ಸರ್ಕಾರದ ಸಹಕಾರವಿದೆ.<br>• ನೋಂದಾಯಿತ ನವೋದ್ಯಮಗಳಿಗೆ ಜಿ.ಎಸ್.ಟಿ. ಗೆ ತಗುಲಿದ ವೆಚ್ಚ, ನವೋದ್ಯಮಗಳಿಗೆ ಮಾರುಕಟ್ಟೆ ಪ್ರಚುರ ಕಾರ್ಯಕ್ಕೆ ಹಾಗೂ ಪೇಟೆಂಟ್ ಗಾಗಿ ಸಲ್ಲಿಸಿಕೊಳ್ಳಲು ತಗಲುವ ವೆಚ್ಚಗಳ ಮರುಪಾವತಿಗೆ ಅವಕಾಶವಿದೆ.<br>• ನವೋದ್ಯಮಿಗಳಿಗಾಗಿ ಕೆ-ಟೆಕ್ ಇನ್ನೋವೇಷನ್ ಹಬ್ ಅನ್ನು ಸ್ಥಾಪಿಸಿ Incubation ಸೌಲಭ್ಯ ಕಲ್ಪಿಸಿದೆ. |

| | |
|---|---|
| | • Common Instrumentation Facility (CIF) ಕೆ-ಟೆಕ್ ಇನ್ನೋವೇಷನ್ ಹಬ್ ಅನ್ನು ಸ್ಥಾಪಿಸುವ ಮೂಲಕ Hardware ನವೋದ್ಯಮಗಳಿಗೆ ಬೆಂಬಲವಿದೆ.<br>• ರಾಜ್ಯದ 19 ಜಿಲ್ಲೆಗಳ 30 ಕಾಲೇಜುಗಳಲ್ಲಿ ಸ್ಥಾಪಿಸಿರುವ New Age Incubation Network (NAIN)ಗಳಲ್ಲಿ E-Step Bootcamps ಗಳನ್ನು ಆಯೋಜಿಸಲಾಗಿರುತ್ತದೆ. ಇದನ್ನು ವಾಣಿಜ್ಯೋದ್ಯಮದ ಮೂಲಭೂತ ವಿಚಾರಗಳನ್ನು ಅರ್ಥ ಮಾಡಿಕೊಳ್ಳಲು ಹಾಗೂ ಅನುಭವವುಳ್ಳ ತರಬೇತುದಾರರು, ಕೈಗಾರಿಕೋದ್ಯಮದ ತಜ್ಞರುಗಳು, ಯಶಸ್ವಿ ವಾಣಿಜ್ಯೋದ್ಯಮಿಗಳು ಹಾಗೂ ಹೆಸರಾಂತ ಶಿಕ್ಷಣ ತಜ್ಞರುಗಳಿಂದ ಮಂಡಿಸಲಾಗುವ ಸೂಕ್ಷ್ಮ ವಿಚಾರಗಳನ್ನು ತಿಳಿಸಲು ವಿದ್ಯಾರ್ಥಿಗಳಿಗೆ / ನವೋದ್ಯಮಗಳಿಗಾಗಿ ವಿಶೇಷವಾಗಿ ವಿನ್ಯಾಸಗೊಳಿಸಲಾಗಿದೆ.<br>• Startup ಪೂರಕ ಪರಿಸರ ವ್ಯವಸ್ಥೆಯ ದಿಗ್ಗಜರು ಹಾಗೂ ಪರಿಣಿತರನ್ನು ಹೊಂದಿರುವ Startup ವಿಷನ್ ಗ್ರೂಪ್‌ಅನ್ನು ರಚಿಸಲಾಗಿರುತ್ತದೆ.<br>ಮುಂದುವರೆದು, ರಾಜ್ಯದಲ್ಲಿ ಪ್ರಸ್ತುತ 1,818 ಸ್ಟಾರ್ಟ್‌ಅಪ್ ಕಂಪನಿಗಳು Startup Cell ನೊಂದಿಗೆ ನೋಂದಣಿಯಾಗಿರುತ್ತದೆ. |
| ಇ) ನವೋದ್ಯಮಗಳಿಗೆ ಹಣಕಾಸು ನೆರವು ನೀಡುವಲ್ಲಿ ಅನುಸರಿಸುತ್ತಿರುವ ಕ್ರಮಗಳು ಮತ್ತು ಪ್ರಗತಿಯ ವಿವರಗಳೇನು; ರಾಜ್ಯದಲ್ಲಿ ಎಷ್ಟು ನವೋದ್ಯಮಗಳಿಗೆ ಪೂರಕ ವ್ಯವಸ್ಥೆ ಮತ್ತು ಆರ್ಥಿಕ ನೆರವನ್ನು ಸರ್ಕಾರದ ವತಿಯಿಂದ ನೀಡಲಾಗಿದೆ? | • ಐಡಿಯಾ2ಪಿಓಸಿ ಯೋಜನೆಯ ಮೂಲಕ ಆರಂಭಿಕ ಹಂತದ ನವೋದ್ಯಮಿಗಳಿಗೆ ರೂ. 50 ಲಕ್ಷವರೆಗೆ ಅನುದಾನ ನೀಡಲು ಅವಕಾಶ ಕಲ್ಪಿಸಲಾಗಿದೆ. ಇಲ್ಲಿಯವರೆಗೆ, 489 ಸ್ಟಾರ್ಟ್‌ಅಪ್‌ಗಳು ಆಯ್ಕೆಗೊಂಡು ರೂ.116 ಕೋಟಿಗಳಷ್ಟು ಸಹಾಯಧನ ನೀಡಲಾಗಿದೆ.<br>• ನೋಂದಾಯಿತ ನವೋದ್ಯಮಗಳಿಗೆ ಜಿ.ಎಸ್.ಟಿ. ಗೆ ತಗಲಿದ ವೆಚ್ಚ, ನವೋದ್ಯಮಗಳಿಗೆ ಮಾರುಕಟ್ಟೆ ಪ್ರಚುರ ಕಾರ್ಯಕ್ಕೆ ಹಾಗೂ ಪೇಟೆಂಟ್ ಗಾಗಿ ಸಲ್ಲಿಸಿಕೊಳ್ಳಲು ತಗಲುವ ವೆಚ್ಚ, ಇತ್ಯಾದಿಗಳ ಮರು ಪಾವತಿ ಮಾಡಲು ಅವಕಾಶ ಕಲ್ಪಿಸಿದೆ. ಇಲ್ಲಿಯವರೆಗೆ, 34 ಸ್ಟಾರ್ಟ್‌ಅಪ್‌ಗಳಿಗೆ ರೂ. 55 ಲಕ್ಷಗಳ ಮೊತ್ತವನ್ನು ನೀಡಲಾಗಿದೆ. ಅಲ್ಲದೆ, KARSEMVEN Fund ಮುಖಾಂತರ 11 ಕಂಪನಿಗಳಿಗೆ ರೂ.54.68ಕೋಟಿ ಹಾಗೂ KITVEN-3(Bioventure) Fund ಮೂಲಕ 4 ಕಂಪನಿಗಳಿಗೆ ರೂ.12.7 ಕೋಟಿಯ ಆರ್ಥಿಕ ನೆರವನ್ನು ನೀಡಲಾಗಿದೆ. |

**(ಐಟಿಬಿಟಿ 05 ಎಲ್ ಸಿಎಂ 2021)**

**(ಡಾ|| ಅಶ್ವಥ್ ನಾರಾಯಣ್ ಸಿ.ಎನ್.)**
ಉಪಮುಖ್ಯಮಂತ್ರಿಗಳು ಹಾಗೂ ವಿದ್ಯುನ್ಮಾನ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 8 ಯುಎಂಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29-01-2021

83
WS
29/1/21

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ. ರಾಜೀವ್ ಪಿ. (ಕುಡಚಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 50ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ. ರಾಜೀವ್ ಪಿ. (ಕುಡಚಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 50ಕ್ಕೆ ಸಂಬಂಧಿಸಿದ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ. ಕೆ )
ಸರ್ಕಾರದ ಅಧೀನ ಕಾರ್ಯದರ್ಶಿ,
(ಎಂ.ಎ-2 & ಮಂಡಳಿ)
ನಗರಾಭಿವೃದ್ಧಿ ಇಲಾಖೆ.

## ಕರ್ನಾಟಕ ವಿಧಾನಸಭೆ

| | |
|---|---|
| ವಿಧಾನಸಭಾ ಸದಸ್ಯರು | ಶ್ರೀ. ರಾಜೀವ ಪಿ. (ಕುಡಚಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 50 |
| ಉತ್ತರಿಸಬೇಕಾದ ದಿನಾಂಕ | 29-01-2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯ ಕುಡಚಿ ಮತಕ್ಷೇತ್ರದ ವ್ಯಾಪ್ತಿಯ ಹಾರೂಗೇರಿ ಮತ್ತು ಮುಗಳಖೋಡ ಪಟ್ಟಣಗಳಿಗೆ ಕೃಷ್ಣಾ ನದಿ ಮೂಲದಿಂದ ಸಂಯುಕ್ತ ನೀರು ಸರಬರಾಜು ಯೋಜನೆಯ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಹೌದು.<br>ಬೆಳಗಾವಿ ಜಿಲ್ಲೆಯ ಕುಡಚಿ ಮತಕ್ಷೇತ್ರದ ವ್ಯಾಪ್ತಿಯ ಹಾರೂಗೇರಿ ಮತ್ತು ಮುಗಳಖೋಡ ಪಟ್ಟಣಗಳಿಗೆ ಕೃಷ್ಣಾ ನದಿ ಮೂಲದಿಂದ ಸಂಯುಕ್ತ ನೀರು ಸರಬರಾಜು ಕಲ್ಪಿಸಲು ರೂ.168.50 ಕೋಟಿಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ದಿನಾಂಕ 18.05.2020 ರಂದು ಪ್ರಸ್ತಾವನೆ ಸ್ವೀಕೃತವಾಗಿದ್ದು, ಪ್ರಸ್ತಾಪಿತ ಯೋಜನೆಯನ್ನು ಅನುಷ್ಠಾನಗೊಳಿಸಲು ಮತ್ತು ನಿರ್ವಹಿಸಲು ಆರ್ಥಿಕವಾಗಿ ಸಮರ್ಥವಾಗಿರುವ ಬಗ್ಗೆ ದಿನಾಂಕ 21.11.2020 ರಂದು ಮಂಡಳಿಯಿಂದ ಸ್ಪಷ್ಟೀಕರಣ ಕೋರಲಾಗಿದೆ. |
| ಆ) | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ಪ್ರಸ್ತಾವನೆಗೆ ಅನುಮೋದನೆ ನೀಡಿ ಕಾಮಗಾರಿಯನ್ನು ಪ್ರಾರಂಭಿಸಲಾಗುವುದು; | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯಿಂದ ಪೂರ್ಣ ಪ್ರಮಾಣದ ಪ್ರಸ್ತಾವನೆ ಸ್ವೀಕೃತವಾದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ ನಿಯಮಾನುಸಾರ ಪರಿಶೀಲಿಸಲಾಗುವುದು. |
| ಇ) | ಯಾವ ಕಾಲಮಿತಿಯಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸಿ ಈ ಪಟ್ಟಣಗಳ ಸಾರ್ವಜನಿಕರಿಗೆ ಕುಡಿಯುವ ನಿರಂತರ ನೀರು ಸರಬರಾಜು ಮಾಡಲಾಗುವುದು; | |

| | | |
|---|---|---|
| ಈ) | ಈ ಯೋಜನೆಯ ಅಂದಾಜು ವೆಚ್ಚವೆಷ್ಟು? (ವಿವರ ನೀಡುವುದು) | ರೂ.168.50 ಕೋಟಿಗಳು |

ಸಂಖ್ಯೆ : ನಅಇ 8 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 7 ಯುಎಂಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29-01-2021

23
U/S
29/1/21

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ.ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 51ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ.ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 51ಕ್ಕೆ ಸಂಬಂಧಿಸಿದ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಲತಾ. ಕೆ )
ಸರ್ಕಾರದ ಅಧೀನ ಕಾರ್ಯದರ್ಶಿ,
(ಎಂ.ಎ-2 & ಮಂಡಳಿ)
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

| | |
|---|---|
| ವಿಧಾನಸಭಾ ಸದಸ್ಯರು | ಶ್ರೀ. ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 51 |
| ಉತ್ತರಿಸಬೇಕಾದ ದಿನಾಂಕ | 29-01-2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು. |

| ಅ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರ ಮತ್ತು ಎಂ.ಕೆ. ಹುಬ್ಬಳ್ಳಿ ಪಟ್ಟಣ ಪಂಚಾಯತಿಗಳಿಗೆ ರೇಣುಕಾ ಸಾಗರ ಜಲಾಶಯದಿಂದ ಕುಡಿಯುವ ನೀರು ಪೂರೈಕೆ ಕಾಮಗಾರಿಯ ಪ್ರಸ್ತಾವನೆ ಇರುವುದು ನಿಜವೇ; | ಇರುವುದಿಲ್ಲ. |
| ಆ) | ಸದರಿ ಪ್ರಸ್ತಾವನೆ ಸರ್ಕಾರದ ಯಾವ ಹಂತದಲ್ಲಿದೆ; | ಉದ್ಭವಿಸುವುದಿಲ್ಲ. |
| ಇ) | ಸದರಿ ಪ್ರಸ್ತಾವನೆಗೆ ಅನುಮೋದನೆ ನೀಡಿ ಅನುದಾನ ಮಂಜೂರು ಮಾಡಲು ಸರ್ಕಾರದ ಕ್ರಮವೇನು? | ಉದ್ಭವಿಸುವುದಿಲ್ಲ. |

ಸಂಖ್ಯೆ : ನಅಇ 7 ಯುಎಂಎಸ್ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

62
U/S
29/1/21



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 6 ಯುಎಂಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29-01-2021

**ಇವರಿಂದ,**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ. ಮುನಿಯಪ್ಪ ವಿ. (ಶಿಡ್ಲಘಟ್ಟ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 83ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ. ಮುನಿಯಪ್ಪ ವಿ. (ಶಿಡ್ಲಘಟ್ಟ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 83ಕ್ಕೆ ಸಂಬಂಧಿಸಿದ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

**(ಲತಾ. ಕೆ )**
ಸರ್ಕಾರದ ಅಧೀನ ಕಾರ್ಯದರ್ಶಿ,
(ಎಂ.ಎ-2 & ಮಂಡಳಿ)
ನಗರಾಭಿವೃದ್ಧಿ ಇಲಾಖೆ.

<u>ಕರ್ನಾಟಕ ವಿಧಾನಸಭೆ</u>

| | |
|---|---|
| ವಿಧಾನ ಸಭೆಯ ಸದಸ್ಯರು | ಶ್ರೀ ಮುನಿಯಪ್ಪ. ವಿ (ಶಿಡ್ಲಘಟ್ಟ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 83 |
| ಉತ್ತರಿಸಬೇಕಾದ ದಿನಾಂಕ | 29.01.2021 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಶಿಡ್ಲಘಟ್ಟ ನಗರದಲ್ಲಿ ಎರಡನೇ ಹಂತದ ಒಳಚರಂಡಿ (ಯು.ಜಿ.ಡಿ) ಕಾಮಗಾರಿ ಪ್ರಾರಂಭಿಸಲು ಕ್ರಿಯಾ ಯೋಜನೆಯ ಪ್ರಸ್ತಾವನೆ ಸರ್ಕಾರಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ ಎರಡನೇ ಹಂತದ ಒಳಚರಂಡಿ (ಯು.ಜಿ.ಡಿ) ಕಾಮಗಾರಿ ಪ್ರಾರಂಭಿಸಲು ಅನುಮೋದನೆ ನೀಡದೇ ಇರಲು ಕಾರಣಗಳೇನು? ಇದರ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ಶಿಡ್ಲಘಟ್ಟ ನಗರಕ್ಕೆ ಎರಡನೇ ಹಂತದ ಒಳಚರಂಡಿ ಕಾಮಗಾರಿಗಳಿಗೆ ರೂ.4490.00 ಲಕ್ಷಗಳ ಅಂದಾಜು ಪಟ್ಟಿಯ ಆಡಳಿತಾತ್ಮಕ ಅನುಮೋದನೆಗಾಗಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ರವರು ದಿನಾಂಕ 1-3-2019 ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದರೆ, ಅನುದಾನದ ಕೊರತೆ ಇರುವ ಕಾರಣ ಸದರಿ ಪ್ರಸ್ತಾವನೆಯನ್ನು ಸದ್ಯಕ್ಕೆ ಕೈಬಿಡುವಂತೆ ತಿಳಿಸಿ ಪ್ರಸ್ತಾವನೆಯನ್ನು ದಿನಾಂಕ 14-08-2019 ರಂದು ಮಂಡಳಿಗೆ ಹಿಂದಿರುಗಿಸಲಾಗಿದೆ. |
| ಇ) | ಶಿಡ್ಲಘಟ್ಟ ನಗರಸಭೆಗೆ 2018-19 ನೇ ಸಾಲಿನಲ್ಲಿ ಎಸ್.ಎಫ್.ಸಿ. | ಸರ್ಕಾರವು ಶಿಡ್ಲಘಟ್ಟ ನಗರಸಭೆಗೆ ರೂ 4.00 ಕೋಟಿ ವಿಶೇಷ ಅನುದಾನವನ್ನು ಸರ್ಕಾರದ ಆದೇಶ ಸಂಖ್ಯೆ: |

| | | |
|---|---|---|
| | ಯೋಜನೆಯಡಿಯಲ್ಲಿ ರೂ.4.00 ಕೋಟಿ ಅನುದಾನ ಬಿಡುಗಡೆ ಮಾಡಿ ತಾತ್ಕಾಲಿಕವಾಗಿ ತಡೆ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ನಅಇ 03 ಎಸ್‌ಎಫ್‌ಸಿ 2019, ದಿ: 09-01-2019 ರಲ್ಲಿ ಮಂಜೂರು ಮಾಡಿದೆ.<br><br>ತದನಂತರ, ಮಂಜೂರು ಮಾಡಲಾಗಿರುವ ವಿಶೇಷ ಅನುದಾನದಡಿ ಕಾಮಗಾರಿಗಳನ್ನು ಇನ್ನೂ ಸಹ ಪ್ರಾರಂಭಿಸದಿರುವ ಹಿನ್ನೆಲೆಯಲ್ಲಿ ದಿನಾಂಕ 13-09-2019 ರಂದು ಮಂಜೂರು ಮಾಡಲಾಗಿದ್ದ ರೂ4.00 ಕೋಟಿ ವಿಶೇಷ ಅನುದಾನವನ್ನು ತಡೆಹಿಡಿಯಲಾಗಿದೆ. |
| ಈ) | ಹಾಗಿದ್ದಲ್ಲಿ, ಸದರಿ ಯೋಜನೆಯ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುತ್ತದೆ? (ಪೂರ್ಣ ಮಾಹಿತಿ ಒದಗಿಸುವುದು) | |
| ಉ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ಶಿಡ್ಲಘಟ್ಟ ನಗರಸಭೆಯು ಪುರಸಭೆಯಿಂದ ನಗರಸಭೆಯಾಗಿ ಮೇಲ್ದರ್ಜೇಗೇರಿಸಿದ್ದು, ನಗರಸಭೆ ಕಛೇರಿಯಲ್ಲಿ ಎಲ್ಲಾ ವೃಂದದ ಸುಮಾರು 236 ಸಿಬ್ಬಂದಿ ವರ್ಗದ ಹುದ್ದೆಗಳು ಖಾಲಿಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಶಿಡ್ಲಘಟ್ಟ ಪುರಸಭೆಯು ನಗರಸಭೆಯಾಗಿ ಮೇಲ್ದರ್ಜೇಗೇರಿಸಿದ ನಂತರ ಮಂಜೂರಾಗಿರುವ ವಿವಿಧ ವೃಂದದ ಒಟ್ಟು 236 ಹುದ್ದೆಗಳ ಪೈಕಿ 62 ಖಾಯಂ ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ. ಉಳಿದಂತೆ 133 ಹುದ್ದೆಗಳು ಖಾಲಿ ಇರುತ್ತದೆ. |
| ಊ) | ಹಾಗಿದ್ದಲ್ಲಿ, ಸಿಬ್ಬಂದಿಗಳನ್ನು ನೇಮಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? | ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ನೇರ ನೇಮಕಾತಿ ಅಡಿಯಲ್ಲಿ ಖಾಲಿ ಇರುವ ಗ್ರೂಪ್ 'ಬಿ' ವೃಂದದ 4 ಹುದ್ದೆಗಳು ಮತ್ತು ಗ್ರೂಪ್ 'ಸಿ' ವೃಂದದ 544 ಹುದ್ದೆಗಳನ್ನು ಒಳಗೊಂಡಂತೆ ಒಟ್ಟು 548 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗದಲ್ಲಿ ನೇಮಕಾತಿ ಪ್ರಕ್ರಿಯೆಯಲ್ಲಿರುತ್ತದೆ.<br><br>"ಸಿ" ವೃಂದದ ಖಾಲಿ ಹುದ್ದೆಗಳ ಮುಂಬಡ್ತಿಗೆ ಸಂಬಂಧಿಸಿದಂತೆ ಜಿಲ್ಲಾ ಮಟ್ಟದಲ್ಲಿ ಮುಂಬಡ್ತಿ ಪ್ರವರ್ಗದಲ್ಲಿ ಖಾಲಿ ಇರುವ ಹುದ್ದೆಗಳನ್ನು |

# ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 17 ಇಎನ್‌ವಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 29.01.2021.

78
4/S
29/1/21

ಇಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
(ಜೀವಿಪರಿಸ್ಥಿತಿ ಮತ್ತು ಪರಿಸರ),
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ.

ಇವರಿಗೆ,

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ. ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 203 ಕ್ಕೆ ಉತ್ತರ ಕಳುಹಿಸುತ್ತಿರುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಇವರ ಅ.ಸ. ಪತ್ರ ಸಂಖ್ಯೆ: ಸಿಐ 29 ಎಂಎಂಎನ್ 2021, ದಿನಾಂಕ: 28.01.2021.
2. ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.203/2021, ದಿನಾಂಕ: 21.01.2021.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ (1)ರ ಅ.ಸ ಪತ್ರದಲ್ಲಿ ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ. ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 203 ರಲ್ಲಿನ ಅಂಶಗಳು ಅರಣ್ಯ, ಪರಿಸರ ಮತ್ತು ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆಗೆ ಸಂಬಂಧಿಸಿದ್ದರಿಂದ ವರ್ಗಾಯಿಸಲಾಗಿರುತ್ತದೆ. ಅದರಂತೆ, ತಯಾರಿಸಲಾದ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

29/01/2021

(ಮುರಳೀಧರ ಎಸ್. ತೆಳ್ಳಿಕೇರಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ
(ಜೀವಿಪರಿಸ್ಥಿತಿ ಮತ್ತು ಪರಿಸರ)

29/1/21

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 203
2. ಮಾನ್ಯ ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
3. ಉತ್ತರಿಸಬೇಕಾದ ದಿನಾಂಕ : 29.01.2021
4. ಉತ್ತರಿಸಬೇಕಾದ ಸಚಿವರು : ಮಾನ್ಯ ಪರಿಸರ ಮತ್ತು ಜೀವಿಶಾಸ್ತ್ರ, ಹಾಗೂ ಪ್ರವಾಸೋದ್ಯಮ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರಾವಳಿ ಪ್ರದೇಶದಲ್ಲಿ CRZ ವ್ಯಾಪ್ತಿಯಲ್ಲಿ ಮರಳು ದಿಬ್ಬ ತೆರವುಗೊಳಿಸಲು ಕೇಂದ್ರ ಸರ್ಕಾರದ 2011 ರ ಅಧಿಸೂಚನೆ ಅವಧಿ 10 ವರ್ಷವಿರುವುದು ಸರ್ಕಾರದ ಗಮನದಲ್ಲಿದೆಯೇ | ಕೇಂದ್ರ ಸರ್ಕಾರವು ಹೊರಡಿಸಿರುವ 2011 ರ ಕರಾವಳಿ ನಿಯಂತ್ರಣ ವಲಯ (Coastal Regulation Zone-CRZ) ನೋಟಿಫಿಕೇಶನ್ ನಲ್ಲಿ ಕರಾವಳಿ ಪ್ರದೇಶದಲ್ಲಿ ಕರಾವಳಿ ನಿಯಂತ್ರಣ ವಲಯ (CRZ) ವ್ಯಾಪ್ತಿಯಲ್ಲಿ ಮರಳು ದಿಬ್ಬ ತೆರವುಗೊಳಿಸಲು 10 ವರ್ಷದ ಅವಧಿಯನ್ನು ನಿಗಧಿಪಡಿಸಿರುವುದಿಲ್ಲ.<br><br>ಕೇಂದ್ರ ಸರ್ಕಾರದ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯವು ದಿನಾಂಕ 06.01.2011 ರಂದು ಜಾರಿಗೆ ತಂದಿದ್ದ 2011 ರ ಕರಾವಳಿ ನಿಯಂತ್ರಣ ವಲಯ ಅಧಿಸೂಚನೆಯನ್ನು ಅಧಿಕ್ರಮಿಸಿ ಅಧಿಸೂಚನೆ ಸಂಖ್ಯೆ: GSR 37(E), ದಿನಾಂಕ: 18.01.2019 ರಲ್ಲಿ ಹೊಸ ಕರಾವಳಿ ನಿಯಂತ್ರಣ ವಲಯ ಅಧಿಸೂಚನೆ 2019 ಅನ್ನು ಹೊರಡಿಸಿರುತ್ತದೆ.<br><br>ಸದರಿ ಅಧಿಸೂಚನೆಯಲ್ಲಿ ಈಗಾಗಲೇ ಕರಾವಳಿ ನಿಯಂತ್ರಣ ವಲಯ (Coastal Regulation Zone-CRZ) ಅಧಿಸೂಚನೆ 2011 ರ ಅನುಸಾರ ತಯಾರಿಸಿ ಕೇಂದ್ರ ಸರ್ಕಾರ ದಿಂದ ಅನುಮೋದಿಸಲ್ಪಟ್ಟ ಕರಾವಳಿ ವಲಯ ನಿರ್ವಹಣಾ ಯೋಜನೆ (Coastal Zone management Plan-CZMP)ಯನ್ನು ಹೊಸ ಅಧಿಸೂಚನೆಯ ಪ್ರಕಾರ ಪರಿಷ್ಕರಿಸಿ ಅನುಮೋದನೆ ಪಡೆಯುವವರೆಗೆ 2011 ರ ಅಧಿಸೂಚನೆಯನ್ನು ಅನುಸರಿಸುವಂತೆ ತಿಳಿಸಲಾಗಿರುತ್ತದೆ. |
| ಆ) | ಇದನ್ನು ಮತ್ತೆ ನವೀಕರಿಸಲು ಕೇಂದ್ರ ಸರ್ಕಾರಕ್ಕೆ ಯಾವಾಗ ಪ್ರಸ್ತಾವನೆ ಸಲ್ಲಿಸಲಾಗುವುದು: | ಉದ್ಭವಿಸುವುದಿಲ್ಲ. |
| ಇ) | ಉಡುಪಿ ಜಿಲ್ಲೆಯಲ್ಲಿ CRZ ವ್ಯಾಪ್ತಿಯ Eco Sensitive Zone ಗುರುತಿಸುವಲ್ಲಿ ತಪ್ಪಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇಲ್ಲ,<br><br>ಕೇಂದ್ರ ಪರಿಸರ, ಅರಣ್ಯ ಮಂತ್ರಾಲಯದ ಅಂಗ ಸಂಸ್ಥೆಯಾದ National Centre for Sustainable Coastal Management (NCSCM) ಚೆನ್ನೈ ಸಂಸ್ಥೆಯು ಕರಾವಳಿ ನಿಯಂತ್ರಣ ವಲಯ (Coastal Regulation Zone-CRZ), 2011 ರ ಅಧಿಸೂಚನೆಯ ಅನುಸಾರ ಕರಾವಳಿ ನಿಯಂತ್ರಿತ ಪ್ರದೇಶವನ್ನು ಅಧಿಸೂಚನೆಯ ವ್ಯಾಖ್ಯಾನದ ಅನುಸಾರ ವಿವಿಧ ವಲಯಗಳಾಗಿ ವರ್ಗೀಕರಿಸಿ, ಈ ವಲಯಗಳ ನಿರ್ವಹಣೆ ಮತ್ತು ವಿವಿಧ ಚಟುವಟಿಕೆಗಳನ್ನು ನಿಯಂತ್ರಣ ಮಾಡುವ ಉದ್ದೇಶದಿಂದ ಕರಾವಳಿ ವಲಯ ನಿರ್ವಹಣಾ ಯೋಜನೆ (Coastal Zone management Plan-CZMP) ಯನ್ನು ತಯಾರಿಸಿದ್ದು, ಕೇಂದ್ರ ಮಂತ್ರಾಲಯವು 2018 ರಲ್ಲಿ ಇದನ್ನು ಅನುಮೋದಿಸಿರುತ್ತದೆ. |
| ಈ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

**ಕಡತ ಸಂಖ್ಯೆ:** ಅಪಜೀ 17 ಇಎನ್ ವಿ 2021

**(ಸಿ.ಪಿ.ಯೋಗೇಶ್ವರ)**
ಮಾನ್ಯ ಪರಿಸರ ಮತ್ತು ಜೀವಿಶಾಸ್ತ್ರ, ಹಾಗೂ
ಪ್ರವಾಸೋದ್ಯಮ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ನಅಇ 19 ಗುಅಪ್ರಾ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 29/01/2021

**ಇವರಿಂದ:**

ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

94
105
29/01/21

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ವಿಧಾನ ಸಭೆ ಸದಸ್ಯರಾದ ಶ್ರೀ ಸೋಮಲಿಂಗಪ್ಪ ಎಂ.ಎಸ್ (ಸಿರಗುಪ್ಪ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 60 ಕ್ಕೆ ಉತ್ತರ ನೀಡುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 60 ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಸಿ.ಎಸ್.ಶಿವಕುಮಾರಸ್ವಾಮಿ)
ಸರ್ಕಾರದ ಅಧೀನ ಕಾರ್ಯದರ್ಶಿ
(ಅಭಿವೃದ್ಧಿ ಪ್ರಾಧಿಕಾರ ಮತ್ತು ನಯೋಸೇ)
ನಗರಾಭಿವೃದ್ಧಿ ಇಲಾಖೆ.



**ಕರ್ನಾಟಕ ವಿಧಾನ ಸಭೆ**

ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ ಎಂ.ಎಸ್ (ಸಿರಗುಪ್ಪ)
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 60
ಉತ್ತರಿಸಬೇಕಾದ ದಿನಾಂಕ : 29.01.2021
ಉತ್ತರಿಸಬೇಕಾದವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಿರಿಗುಪ್ಪ ಪುರಸಭೆಯನ್ನು ಯಾವಾಗ ನಗರಸಭೆಯನ್ನಾಗಿ ಘೋಷಣೆ ಮಾಡಲಾಗಿದೆ; | ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 214 ಎಂಎಲ್ಆರ್ 2013, ಬೆಂಗಳೂರು ದಿ: 09.12.2014 ರ ಆದೇಶದಂತೆ ಸಿರುಗುಪ್ಪ ಪುರಸಭೆಯನ್ನು ನಗರಸಭೆಯನ್ನಾಗಿ ಘೋಷಿಸಲಾಗಿದೆ. |
| ಆ) | ಸಿರಿಗುಪ್ಪ ನಗರ ಸಭೆಗೆ ನಗರಾಭಿವೃದ್ಧಿ ಪ್ರಾಧಿಕಾರ ರಚನೆ ಕುರಿತು ವಿಳಂಬ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಿರುಗುಪ್ಪ ನಗರ ಸಭೆಯನ್ನು ನಗರಾಭಿವೃದ್ಧಿ ಪ್ರಾಧಿಕಾರವನ್ನಾಗಿ ರಚಿಸುವ ಪ್ರಸ್ತಾವನೆ ಸರ್ಕಾರಕ್ಕೆ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ, ವಿಳಂಬದ ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ) | ಹಾಗಿದ್ದಲ್ಲಿ ಸಿರಿಗುಪ್ಪ ನಗರಾಭಿವೃದ್ಧಿ ಪ್ರಾಧಿಕಾರದ ರಚನೆಗೆ ವಿಳಂಬವಾಗಲು ಕಾರಣವೇನು; (ಮಾಹಿತಿ ನೀಡುವುದು) | ಉದ್ಭವಿಸುವುದಿಲ್ಲ. |
| ಈ) | ಸಿರಿಗುಪ್ಪ ನಗರಾಭಿವೃದ್ಧಿ ಪ್ರಾಧಿಕಾರವನ್ನು ರಚನೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; ಇದ್ದಲ್ಲಿ, ಯಾವಾಗ ರಚನೆ ಮಾಡಲಾಗುವುದು? (ವಿವರ ನೀಡುವುದು) | ಇರುವುದಿಲ್ಲ |

ನಅಇ 19 ಗುಅಪ್ರಾ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 15 ಐಎಪಿ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021.

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

50
29/01/21

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 97ಕ್ಕೆ ಉತ್ತರಿಸುವ ಬಗ್ಗೆ.

---*---

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 97ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಎನ್. ಕುಮಾರ್

(ಎನ್. ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

28/01/2021

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 97
2. ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)
3. ಉತ್ತರಿಸುವ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಹಾಸನ ಜಿಲ್ಲೆಯಲ್ಲಿ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಅಭಿವೃದ್ಧಿಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು ಹಾಗೂ ಕೈಗಾರಿಕೆಗಳ ಅಭಿವೃದ್ಧಿಗೆ ಸರ್ಕಾರ ನೀಡುವ ಸವಲತ್ತುಗಳೇನು (ಸಂಪೂರ್ಣ ಮಾಹಿತಿ ನೀಡುವುದು); | ಹಾಸನ ಜಿಲ್ಲೆಯಲ್ಲಿ ಕೈಗಾರಿಕಾ ಪ್ರದೇಶವನ್ನು ಅಭಿವೃದ್ಧಿಪಡಿಸಲು ರಸ್ತೆ, ಚರಂಡಿ, ಬೀದಿ ದೀಪ, ವಿದ್ಯುತ್ ಸಂಪರ್ಕ, ನೀರು ಸರಬರಾಜು ಮತ್ತು ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ.<br>ಹೊಸ ಕೈಗಾರಿಕಾ ನೀತಿ 2020-25ರಲ್ಲಿ ಸಿಗುವ ರಿಯಾಯಿತಿ ಹಾಗೂ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. |
| (ಆ) | ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ವಿಸ್ತೀರ್ಣ ಎಷ್ಟು (ವಿಧಾನಸಭಾ ಕ್ಷೇತ್ರವಾರು ಕಳೆದ ಮೂರು ವರ್ಷಗಳ ಸಂಪೂರ್ಣ ಮಾಹಿತಿ ನೀಡುವುದು); | ಕಳೆದ 3 ವರ್ಷಗಳ ಅವಧಿಯಲ್ಲಿ ಹಾಸನ ಜಿಲ್ಲೆ ಮತ್ತು ತಾಲ್ಲೂಕು, ಭುವನಹಳ್ಳಿ ಮತ್ತು ಇತರೆ ಗ್ರಾಮಗಳಲ್ಲಿನ ಒಟ್ಟು 189-04 ಎಕರೆ ಜಮೀನನ್ನು ಏಕಘಟಕ ಸಂಕೀರ್ಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾಗಿದೆ.<br>ವಿವರಗಳನ್ನು ಅನುಬಂಧ-1 ರಲ್ಲಿ ಒದಗಿಸಿದೆ. |
| (ಇ) | ಕೈಗಾರಿಕೆಗಳನ್ನು ಸ್ಥಾಪಿಸಲು ಯಾವ ಯಾವ ಕೈಗಾರಿಕೆಗಳಿಗೆ ಹಾಗೂ ಕೈಗಾರಿಕೋದ್ಯಮಿಗಳಿಗೆ ನಿವೇಶನ ನೀಡಲಾಗಿದೆ; ಈ ನಿವೇಶನಗಳಲ್ಲಿ ಯಾವ ಯಾವ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ | ವಿಧಾನಸಭಾ ಕ್ಷೇತ್ರವಾರು ಮಾಹಿತಿಯನ್ನು ಅನುಬಂಧ-2 ರಲ್ಲಿ ಒದಗಿಸಿದೆ. |

| | | |
|---|---|---|
| | (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು); | |
| (ಈ) | ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳನ್ನು ಸ್ಥಾಪಿಸಲು ನೀಡಲಾಗಿರುವ ನಿವೇಶನಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸದೆ ಇರುವ ಉದ್ಯಮಿಗಳ ಸಂಪೂರ್ಣ ಮಾಹಿತಿ ನೀಡುವುದು; | ಕಳೆದ ಮೂರು ವರ್ಷಗಳಲ್ಲಿ ಹಂಚಿಕೆ ಪಡೆದು ಕೈಗಾರಿಕೆಗಳನ್ನು ಸ್ಥಾಪಿಸದೆ ಇರುವ ಯಾವುದೇ ಪ್ರಕರಣಗಳು ಇರುವುದಿಲ್ಲ. |
| (ಉ) | ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳನ್ನು ಸ್ಥಾಪಿಸಲು ಯಾವ ಯಾವ ಕೈಗಾರಿಕೆಗಳಿಗೆ ಹಾಗೂ ಕೈಗಾರಿಕೋದ್ಯಮಿಗಳಿಗೆ ನೀಡಲಾಗಿರುವ ನಿವೇಶನಗಳಲ್ಲಿ ಉದ್ದೇಶದ ಕೈಗಾರಿಕೆಗಳನ್ನು ಸ್ಥಾಪಿಸದೆ ಕೆಲವರು ಪರಭಾರೆ ಮಾಡಿರುವ ಉದ್ಯಮಿಗಳ ಸಂಪೂರ್ಣ ಮಾಹಿತಿ ನೀಡುವುದು; | ಕೈಗಾರಿಕೆಗಳನ್ನು ಸ್ಥಾಪಿಸದೆ ನಿವೇಶನ ಪರಭಾರೆ ಮಾಡಿರುವ ಯಾವುದೇ ಪ್ರಕರಣಗಳು ಇರುವುದಿಲ್ಲ. |
| (ಊ) | ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳನ್ನು ಪ್ರಾರಂಭಿಸಲು ನಿವೇಶನ ನೀಡುವಾಗ ಸರ್ಕಾರ ಅನುಸರಿಸುವ ಮಾನದಂಡಗಳೇನು, ವಿಧಿಸುವ ಷರತ್ತುಗಳೇನು ಹಾಗೂ ಮಾನದಂಡಗಳನ್ನು ಮತ್ತು ಷರತ್ತುಗಳನ್ನು ಉಲ್ಲಂಘಿಸಿರುವ ಕೈಗಾರಿಕೋದ್ಯಮಿಗಳ ಸಂಪೂರ್ಣ ಮಾಹಿತಿಯನ್ನು ವಿಧಾನಸಭಾ ಕ್ಷೇತ್ರವಾರು ನೀಡುವುದು; | ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳನ್ನು ಪ್ರಾರಂಭಿಸಲು ನಿವೇಶನ ನೀಡುವಾಗ ಅನುಸರಿಸುವ ಮಾನದಂಡಗಳ ವಿವರಗಳನ್ನು ಅನುಬಂಧ-3 ರಲ್ಲಿ ಒದಗಿಸಿದೆ.<br><br>ನಿವೇಶನ ಹಂಚಿಕೆ ಪಡೆದ ಕೈಗಾರಿಕೋದ್ಯಮಿಗಳು ನಿಗದಿತ ಅವಧಿಯಲ್ಲಿ ನಿವೇಶನದ ಮೊಬಲಗನ್ನು ಕೆ.ಐ.ಎ.ಡಿ.ಬಿ.ಗೆ ಪಾವತಿಸಿ, ಸ್ವಾಧೀನ ಪತ್ರ ಪಡೆದುಕೊಳ್ಳುವುದು ಮತ್ತು ಗುತ್ತಿಗೆ ಕರಾರು ಪತ್ರವನ್ನು ನೆರವೇರಿಸಿಕೊಳ್ಳುವುದು ಹಾಗೂ ಕರಾರು ಪತ್ರ ನೆರವೇರಿಸಿಕೊಂಡ 6 ತಿಂಗಳೊಳಗಾಗಿ ಕಟ್ಟಡ ನಿರ್ಮಾಣದ |




ಸಂಖ್ಯೆ: ಸಿಒ 10 ಸಿಎಲ್‌ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

U/S
16
29/01/21

**ಇವರಿಂದ,**

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

**ಇವರಿಗೆ,**

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಬಸನಗೌಡ ಆರ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 205 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಬಸನಗೌಡ ಆರ್ ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 205 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Radha H.C
**(ಹೆಚ್.ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಬಸನಗೌಡ ಆರ್. ಪಾಟೀಲ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 205

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ವಿವರಣೆ |
|---|---|---|
| ಅ) | ರಾಜ್ಯದಲ್ಲಿ ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳಿಂದ ಎಷ್ಟು ಜನ ರೈತರು ಬೆಳೆಸಾಲ ಪಡೆದಿದ್ದಾರೆ; ಸಾಲದ ಒಟ್ಟು ಮೊತ್ತ ಎಷ್ಟು; (ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳ ಪ್ರತ್ಯೇಕ ವಿವರವನ್ನು ಜಿಲ್ಲಾವಾರು ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಂದ ದಿನಾಂಕ:31.03.2020 ರ ಅಂತ್ಯಕ್ಕೆ 23,36,536 ರೈತರು ರೂ.13514.00 ಕೋಟಿಗಳ ಬೆಳೆ ಸಾಲ ಪಡೆದಿರುತ್ತಾರೆ. ಜಿಲ್ಲಾವಾರು ವಿವರವನ್ನು **ಅನುಬಂಧ-01** ರಲ್ಲಿ ನೀಡಲಾಗಿದೆ.<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ರಾಜ್ಯದಲ್ಲಿ ಶೆಡ್ಯೂಲ್ಡ್ ವಾಣಿಜ್ಯ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳಿಂದ 44,94,470 ರೈತರು ರೂ.51,414 ಕೋಟಿ ಬೆಳೆ ಸಾಲ ಪಡೆದಿದ್ದಾರೆ. ವಿವರವನ್ನು **ಅನುಬಂಧ-02 ಮತ್ತು ಅನುಬಂಧ-03** ರಲ್ಲಿ ನೀಡಲಾಗಿದೆ. |
| ಆ) | ಈ ಬೆಳೆ ಸಾಲದ ಮೊತ್ತದಲ್ಲಿ ಮರುಪಾವತಿ ಆಗಿರುವ ಮತ್ತು ಬಾಕಿ ಇರುವ ಮೊತ್ತವೆಷ್ಟು; (ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಸಹಕಾರಿ ಸಂಸ್ಥೆಗಳ ಪ್ರತ್ಯೇಕ ವಿವರವನ್ನು ಜಿಲ್ಲಾವಾರು ನೀಡುವುದು) | **ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಈ ಬೆಳೆ ಸಾಲದಲ್ಲಿ ದಿನಾಂಕ:31.03.2020 ರವರೆಗೆ ರೂ. 9030.53 ಕೋಟಿಗಳು ಮರುಪಾವತಿ ಆಗಿದ್ದು, ರೂ.4781.47 ಕೋಟಿಗಳು ಬಾಕಿ ಇದ್ದು, ಬಹುತೇಕ ಸಾಲಗಳು ಚಾಲ್ತಿಯಲ್ಲಿರುತ್ತವೆ. ಜಿಲ್ಲಾವಾರು ವಿವರವನ್ನು **ಅನುಬಂಧ-01 ರಲ್ಲಿ** ನೀಡಲಾಗಿದೆ<br>**ವಾಣಿಜ್ಯ ಬ್ಯಾಂಕುಗಳಿಗೆ ಸಂಬಂಧಿಸಿದಂತೆ**<br>ಬೆಳೆ ಸಾಲದ ಮೊತ್ತದಲ್ಲಿ ಮರುಪಾವತಿ ಆಗಿರುವ ಮತ್ತು ಬಾಕಿ ಇರುವ ಮೊತ್ತದ ಮಾಹಿತಿ ಲಭ್ಯವಿಲ್ಲವೆಂದು ರಾಜ್ಯ ಮಟ್ಟದ ಬ್ಯಾಂಕರುಗಳ ಸಮಿತಿಯ ಸಂಚಾಲಕರು ತಿಳಿಸಿರುವರು. |
| ಇ) | ಕೊರೊನಾ ವೈರಸ್ ಹಿನ್ನಲೆಯಲ್ಲಿ ರೈತರ ಸಾಲ ಮನ್ನಾ ಮಾಡುವ ಕುರಿತು ಸರ್ಕಾರದ ನಿಲುವೇನು? | ಅಂತಹ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಸಂಖ್ಯೆ: ಸಿಒ 10 ಸಿಎಲ್‌ಎಸ್ 2021

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು




ಸಂಖ್ಯೆ: ಸಿಒ 08 ಸಿಸಿಬಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

87
29/01/2021

ಇವರಿಂದ,

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

ಇವರಿಗೆ,

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 72 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ರಾಜೇಗೌಡ ಟಿ.ಡಿ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 72 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Radha H C
**(ಹೆಚ್.ಸಿ. ರಾಧ)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆಯ ಸದಸ್ಯರು : ಶ್ರೀ ರಾಜೇಗೌಡ. ಟಿ.ಡಿ. (ಶೃಂಗೇರಿ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 72

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಷ್ಟು ಡಿಸಿಸಿ ಬ್ಯಾಂಕ್‌ಗಳಿವೆ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ 21 ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕುಗಳಿರುತ್ತವೆ. ಜಿಲ್ಲಾವಾರು ಮಾಹಿತಿ ಈ ಕೆಳಕಂಡಂತಿದೆ. |

| ಕ್ರ. ಸಂ. | ಜಿಲ್ಲೆಯ ಹೆಸರು | ಬ್ಯಾಂಕಿನ ಹೆಸರು |
|---|---|---|
| 1 | ಬೆಂಗಳೂರು | ಬೆಂಗಳೂರು, ಬೆಂಗಳೂರು (ಗ್ರಾ) ಮತ್ತು ರಾಮನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 2 | ತುಮಕೂರು | ತುಮಕೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 3 | ಕೋಲಾರ ಮತ್ತು ಚಿಕ್ಕಬಳ್ಳಾಪುರ | ಕೋಲಾರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 4 | ಚಿತ್ರದುರ್ಗ | ಚಿತ್ರದುರ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 5 | ದಾವಣಗೆರೆ | ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 6 | ಶಿವಮೊಗ್ಗ | ಶಿವಮೊಗ್ಗ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 7 | ಮೈಸೂರು ಮತ್ತು ಚಾಮರಾಜನಗರ | ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 8 | ಮಂಡ್ಯ | ಮಂಡ್ಯ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 9 | ಹಾಸನ | ಹಾಸನ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 10 | ಚಿಕ್ಕಮಗಳೂರು | ಚಿಕ್ಕಮಗಳೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 11 | ಕೊಡಗು | ಕೊಡಗು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 12 | ದಕ್ಷಿಣ ಕನ್ನಡ ಮತ್ತು ಉಡುಪಿ | ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 13 | ಬೆಳಗಾವಿ | ಬೆಳಗಾವಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 14 | ವಿಜಯಪುರ | ವಿಜಯಪುರ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 15 | ಬಾಗಲಕೋಟ | ಬಾಗಲಕೋಟೆ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |
| 16 | ಧಾರವಾಡ ಹಾವೇರಿ ಮತ್ತು ಗದಗ | ಕರ್ನಾಟಕ ಸೆಂಟ್ರಲ್ ಕೋ-ಆಪರೇಟಿವ್ ಬ್ಯಾಂಕ್ ನಿ. |
| 17 | ಉತ್ತರ ಕನ್ನಡ | ಕೆನರಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. ಶಿರಸಿ (ಉ.ಕ) |
| 18 | ಕಲಬುರಗಿ ಮತ್ತು ಯಾದಗಿರಿ | ಕಲಬುರಗಿ ಮತ್ತು ಯಾದಗಿರಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ. |

<table>
<tr><td></td><td></td><td><table>
<tr><td>19</td><td>ಬಳ್ಳಾರಿ</td><td>ಬಳ್ಳಾರಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ.</td></tr>
<tr><td>20</td><td>ಬೀದರ್</td><td>ಬೀದರ್ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ.</td></tr>
<tr><td>21</td><td>ರಾಯಚೂರು ಮತ್ತು ಕೊಪ್ಪಳ</td><td>ರಾಯಚೂರು ಮತ್ತು ಕೊಪ್ಪಳ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ.</td></tr>
</table></td></tr>
<tr><td>ಆ)</td><td>ಎಷ್ಟು ಡಿಸಿಸಿ ಬ್ಯಾಂಕ್‌ಗಳು ಲಾಭ ಹಾಗೂ ನಷ್ಟದಲ್ಲಿವೆ; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ರಾಜ್ಯದಲ್ಲಿ 19 ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್‌ಗಳು ಲಾಭದಲ್ಲಿದ್ದು, 02 ಬ್ಯಾಂಕುಗಳು ನಷ್ಟದಲ್ಲಿವೆ, ನಷ್ಟದಲ್ಲಿರುವ ಬ್ಯಾಂಕುಗಳ ವಿವರ.<br>1. ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ನಿ.<br>2. ಕಲಬುರಗಿ ಮತ್ತು ಯಾದಗಿರಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ.</td></tr>
<tr><td>ಇ)</td><td>ನಷ್ಟದಲ್ಲಿರುವ ಡಿಸಿಸಿ ಬ್ಯಾಂಕ್‌ಗಳ ಪುನಶ್ಚೇತನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು;</td><td>ನಷ್ಟದಲ್ಲಿರುವ ಜಿಲ್ಲಾ ಸಹಕಾರ ಕೇಂದ್ರಗಳ ಪುನಶ್ಚೇತನಕ್ಕೆ ಸಂಬಂಧಿಸಿದಂತೆ ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿದೆ.<br>1. ದಿನಾಂಕ: 30-06-2020 ಕ್ಕೆ ಇದ್ದಂತೆ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಸಾಲಗಳ ಅಸಲು ಪಾವತಿಸಿದಲ್ಲಿ ಬಡ್ಡಿ ಮನ್ನಾ ಮಾಡಲಾಗಿದೆ.<br>2. ಬ್ಯಾಂಕಿನ ಪುನಶ್ಚೇತನಕ್ಕೆ ನಬಾರ್ಡ್ ನಿಂದ ಕನ್ಸಲ್‌ಟೆಂಟ್ ನೇಮಕ ಮಾಡಿದ್ದು, ವರದಿ ನಿರೀಕ್ಷಣೆಯಲ್ಲಿರುತ್ತದೆ.<br>3. ಸುಸ್ತಿಯಾದ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಸಾಲಗಳನ್ನು ಮರುಪಾವತಿ ಮಾಡದೇ ಇರುವ ಸುಸ್ತಿದಾರರ ವಿರುದ್ಧ ಕಾನೂನು ಕ್ರಮ ಜರುಗಿಸಿ ವಸೂಲಿ ಮಾಡಲು ಕ್ರಮವಿಡಲಾಗಿದೆ<br>4. ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ನಿ. ಇದರ ಬಜಾರ್ ಶಾಖೆಯಲ್ಲಿ ನಡೆದ ರೂ.62.77 ಕೋಟಿಗಳ ಅವ್ಯವಹಾರಕ್ಕೆ ಸಂಬಂಧಿಸಿದಂತೆ ವಸೂಲಾತಿಗಾಗಿ ಸಿವಿಲ್ ಹಾಗೂ ಕ್ರಿಮಿನಲ್ ದಾವೆ ದಾಖಲಿಸಿದ್ದು, ಎಲ್ಲಾ ಪ್ರಕರಣಗಳು ಪ್ರಗತಿಯಲ್ಲಿರುತ್ತದೆ.</td></tr>
<tr><td>ಈ)</td><td>ಡಿಸಿಸಿ ಬ್ಯಾಂಕ್‌ಗಳಿಗೆ ಕಾರ್ಯದರ್ಶಿಗಳನ್ನು ನೇಮಕ ಮಾಡುವಾಗ ಸರ್ಕಾರ ಪರಿಗಣಿಸುವ ಅರ್ಹತೆಗಳೇನು? (ಆದೇಶ ಪ್ರತಿಯೊಂದಿಗೆ ವಿವರ ನೀಡುವುದು)</td><td>ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್‌ಗಳಿಗೆ ಕಾರ್ಯದರ್ಶಿ ಪದನಾಮ ಇರುವುದಿಲ್ಲ. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಾಗಿ ನೇಮಕ ಮಾಡುತ್ತಿದ್ದು, ನಬಾರ್ಡನ ಮಾನದಂಡಗಳು, ಆರ್‌ಬಿಐನ ನಿಯಮಾವಳಿಗಳು ಹಾಗೂ ವೈದ್ಯನಾಥನ್ ವರದಿಯ MOU ಪ್ರಕಾರ ಹಾಗೂ ಆಯಾ ಬ್ಯಾಂಕುಗಳು ತಮ್ಮ ಬ್ಯಾಂಕಿನ ಉಪವಿಧಿಗಳನ್ವಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ನೇಮಕ ಮಾಡಿಕೊಳ್ಳಲು ಅವಕಾಶವಿರುತ್ತದೆ. ಕರ್ನಾಟಕ ಸಹಕಾರ ಸಂಘಗಳ ನಿಯಮ-1960 ರನ್ವಯ ಸಹಕಾರ ಇಲಾಖೆಯ ಅಧಿಕಾರಿಗಳನ್ನು ಸಹ ನಿಯೋಜನೆ ಮಾಡಲು ಅವಕಾಶವಿರುತ್ತದೆ. ನಬಾರ್ಡ ಮಾನದಂಡಗಳನ್ನು ಅನುಬಂಧದಲ್ಲಿ ನೀಡಲಾಗಿದೆ.</td></tr>
</table>

ಕಡತ ಸಂಖ್ಯೆ: ಸಿಒ 08 ಸಿಸಿಬಿ 2021

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು.



ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 29 ಎಂಆರ್ಇ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

33
29/1/2021

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:108ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.108/2021, ದಿನಾಂಕ:21.01.2021.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:108ಕ್ಕೆ ದಿನಾಂಕ:29.01.2021ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಉತ್ತರವನ್ನು ಪಿ.ಡಿ.ಎಫ್ ಮಾದರಿಯಲ್ಲಿ ಇ-ಮೇಲ್ ಸಂಖ್ಯೆ: dsqb-kla-kar@nic.in ರ ಮೂಲಕ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್.ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 108
2. ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎಸ್.ಎ.
3. ಉತ್ತರಿಸಬೇಕಾದ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಎಪಿಎಂಸಿ ಕಾಯ್ದೆ ತಿದ್ದುಪಡಿ ಮೂಲಕ ರೈತರುಗಳಿಗೆ ಲಭ್ಯವಾಗುವ ಪ್ರಯೋಜನಗಳೇನು; | ರಾಜ್ಯ ಸರ್ಕಾರವು ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 8 ಹಾಗೂ ಕಲಂ 117ಕ್ಕೆ ದಿನಾಂಕ:31/12/2020 ರಂದು ಕಾಯ್ದೆ ಸಂಖ್ಯೆ:59/2020ರ ಮೂಲಕ ತಿದ್ದುಪಡಿ ಮಾಡಿ ಜಾರಿಗೆ ನೀಡಲಾಗಿದೆ. ಮಾರುಕಟ್ಟೆ ವ್ಯವಸ್ಥೆಯನ್ನು ಸರಳೀಕರಣಗೊಳಿಸುವ ಉದ್ದೇಶದೊಂದಿಗೆ ಈ ತಿದ್ದುಪಡಿಯನ್ನು ತರಲಾಗಿದೆ<br><br>ಕೃಷಿ ಉತ್ಪನ್ನ ಮಾರುಕಟ್ಟೆ ಕಾಯ್ದೆ ತಿದ್ದುಪಡಿಯಿಂದಾಗಿ ರೈತರಿಗೆ ಆಗುವ ಪ್ರಯೋಜನಗಳು:-<br>➢ ರೈತರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆ ಪ್ರಾಂಗಣಗಳು, ಉಪ ಮಾರುಕಟ್ಟೆ ಪ್ರಾಂಗಣಗಳು, ಮಾರುಕಟ್ಟೆ ಉಪ ಪ್ರಾಂಗಣಗಳಲ್ಲದೇ ತಮ್ಮ ಇಚ್ಛೆಯಂತೆ ಫಾರಂ ಗೇಟ್/ಹೊಲಗಳಲ್ಲಿ, ಅಂತರ್ ರಾಜ್ಯ ಹಾಗೂ ರಾಜ್ಯದೊಳಗೆ ನೇರವಾಗಿ ಮಾರಾಟ ಮಾಡಲು ಹಾಗೂ ಖರೀದಿದಾರರು ನೇರವಾಗಿ ಖರೀದಿಸಲು ಮುಕ್ತ ಅವಕಾಶ ಕಲ್ಪಿಸಲಾಗಿದೆ.<br>➢ ರೈತರು ನೇರವಾಗಿ ತಮ್ಮ ಹೊಲಗಳಲ್ಲಿ ದೊಡ್ಡ ಗ್ರಾಹಕರಿಗೆ ಮಾರಾಟ ಮಾಡುವುದರಿಂದ ಮಧ್ಯವರ್ತಿಗಳ ಅಥವಾ ಕಮೀಷನ್ ಏಜೆಂಟ್‌ಗಳ ಪಾತ್ರವಿರುವುದಿಲ್ಲ.<br>➢ ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಪ್ರಾಂಗಣಕ್ಕೆ ಸಾಗಾಣಿಕೆ ಮಾಡುವ ಹಾಗೂ ಲೋಡ್ ಮತ್ತು ಅನ್‌ಲೋಡ್ ಮಾಡಲು ತಗಲುವ ವೆಚ್ಚದಲ್ಲಿ ಗಣನೀಯ ಕಡಿತ ಉಂಟಾಗುತ್ತದೆ. ಇದರಿಂದ ರೈತರಿಗೆ ಸಾಗಾಣಿಕೆ ಮತ್ತು ಲೋಡಿಂಗ್/ ಅನ್‌ಲೋಡಿಂಗ್ ವೆಚ್ಚ ಉಳಿತಾಯವಾಗುತ್ತದೆ.<br>➢ ತಿದ್ದುಪಡಿಯಿಂದಾಗಿ ಗ್ರಾಹಕರು ಕೃಷಿ ಉತ್ಪನ್ನಗಳಿಗೆ ನೀಡುವ ಬೆಲೆಯಲ್ಲಿ ರೈತನಿಗೆ ಹೆಚ್ಚಿನ ಪಾಲು ದೊರೆಯಲು ಅವಕಾಶವಾಗುತ್ತದೆ.<br>ರೈತ ಮಾರಾಟಗಾರರಿಗೆ ಪ್ರಸ್ತುತ ಇರುವ ವಿವಿಧ ಮಾರುಕಟ್ಟೆ ಚಾನಲ್‌ಗಳಾದ ಮಾರುಕಟ್ಟೆ ಪ್ರಾಂಗಣ, ನೇರ ಖರೀದಿ ಕೇಂದ್ರ, ಖಾಸಗಿ ಮಾರುಕಟ್ಟೆ ಪ್ರಾಂಗಣ, ರೈತ-ಗ್ರಾಹಕ ಮಾರುಕಟ್ಟೆ ಪ್ರಾಂಗಣ, ಉಗ್ರಾಣ ಆಧಾರಿತ ಮಾರಾಟ ಚಟುವಟಿಕೆ ಇತ್ಯಾದಿಗಳೊಂದಿಗೆ ಮತ್ತೊಂದು ಉತ್ತಮ ಬದಲಿ (alternative marketing channel) ಸೌಕರ್ಯ ಲಭ್ಯವಾಗುತ್ತದೆ. |

| | | |
|---|---|---|
| | | ➢ ಹೆಚ್ಚು ಮಧ್ಯವರ್ತಿಗಳಿಂದ ಹೊರತಾದ ಈ ಸೌಲಭ್ಯದಿಂದ ತಮ್ಮ ಉತ್ಪನ್ನಕ್ಕೆ ಹೆಚ್ಚಿನ ಧಾರಣೆ ಪಡೆಯಲು ಅವಕಾಶ ಲಭ್ಯವಾಗುತ್ತದೆ.<br>➢ ಎಂ.ಎನ್.ಸಿ/ಕಾರ್ಪೋರೇಟ್ ಸಂಸ್ಥೆಗಳು ಬೃಹತ್ ಮಟ್ಟದಲ್ಲಿ ಖರೀದಿಗೆ ಮುಂದಾದಲ್ಲಿ ಕೃಷಿ ಮಾರುಕಟ್ಟೆಯ ಮೂಲಭೂತ ಸೌಕರ್ಯಗಳಲ್ಲಿ ಹೆಚ್ಚಿನ ಬಂಡವಾಳ ಹೂಡಿಕೆಯಾಗುವುದರಿಂದ ಹೆಚ್ಚಿನ ಸೌಲಭ್ಯಗಳು ಲಭ್ಯವಾಗುವ ಅವಕಾಶವಿದೆ.<br>➢ ತಾನು ಬೆಳೆದ ಬೆಳೆ ರೈತನ ಸ್ವತ್ತಾಗಿದ್ದು, ತಮ್ಮ ಇಚ್ಛೆಯಂತೆ ನಮ್ಮ ಬೆಳೆ ನಮ್ಮ ಹಕ್ಕು ಎಂದು ಮಾರಾಟ ಮಾಡಲು ರೈತರು ಸ್ವತಂತ್ರರಾಗಿರುತ್ತಾರೆ. |
| ಆ. | ಸುಗ್ರೀವಾಜ್ಞೆ ಮೂಲಕ ಎಪಿಎಂಸಿ ಕಾಯ್ದೆಗೆ ತರಲಾದ ಎರಡು ತಿದ್ದುಪಡಿಗಳು ಮತ್ತು ಅವುಗಳ ಉಪಯುಕ್ತತೆ ಕುರಿತ ವಿವರಗಳೇನು; | <u>ಮಾರುಕಟ್ಟೆ ಕಾಯ್ದೆ ಕಲಂ 8(2):-</u><br>ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ 1966ರ ಕಲಂ 8(2) ರಡಿ ರೈತರು ತಾವು ಬೆಳೆದ ಕೃಷಿ ಉತ್ಪನ್ನಗಳನ್ನು ಮಾರುಕಟ್ಟೆ ಪ್ರಾಂಗಣದಲ್ಲಿಯೇ ಮಾರಾಟ ಮಾಡುವುದು ಈ ಹಿಂದೆ ಕಡ್ಡಾಯವಾಗಿತ್ತು.<br>ಮಾರುಕಟ್ಟೆ ಕಾಯ್ದೆ ಕಲಂ 8(2)ಕ್ಕೆ ತಿದ್ದುಪಡಿ ತಂದ ನಂತರದಲ್ಲಿ ಅಧಿಸೂಚಿತ ಕೃಷಿ ಉತ್ಪನ್ನಗಳನ್ನು ಎಪಿಎಂಸಿ ಪ್ರಾಂಗಣದಲ್ಲಿಯೇ ಮಾರಾಟ/ಖರೀದಿ ಮಾಡಬೇಕೆಂಬ ನಿರ್ಬಂಧ ತೆರವುಗೊಳಿಸಲಾಗಿದೆ. ಮಾರುಕಟ್ಟೆ ಸಮಿತಿಗಳ ನಿಯಂತ್ರಣವನ್ನು ಮಾರುಕಟ್ಟೆ ಪ್ರಾಂಗಣಕ್ಕೆ ಸೀಮಿತಗೊಳಿಸಿದೆ.<br>ಈ ತಿದ್ದುಪಡಿಯಿಂದ ರೈತ ತಾನು ಬೆಳೆದ ಬೆಳೆಯನ್ನು ತನ್ನ ಇಚ್ಛೆಯಂತೆ ಹೊಲ/ಫಾರಂ ಗೇಟ್ ಅಥವಾ ಎಪಿಎಂಸಿ ಮಾರುಕಟ್ಟೆಯಲ್ಲಿ ಮಾರಾಟ ಮಾಡುವ ಸ್ವಾತಂತ್ರ್ಯ ಹೊಂದಿದ್ದಾನೆ.<br><u>ಮಾರುಕಟ್ಟೆ ಕಾಯ್ದೆ ಕಲಂ 117:-</u><br>ಮಾರುಕಟ್ಟೆ ಕಾಯ್ದೆ ಕಲಂ 117 ರಡಿ ಕಲಂ 8(2)ರ ಉಲ್ಲಂಘನೆಗೆ ದಂಡ ಮತ್ತು ಸಜೆಯನ್ನು ವಿಧಿಸಲಾಗುತ್ತಿತ್ತು.<br>ಕಲಂ 117ಕ್ಕೆ ತಿದ್ದುಪಡಿ ಮಾಡಿ ಕಲಂ 8(2)ರ ಉಲ್ಲಂಘನೆಗೆ ವಿಧಿಸಲಾಗುತ್ತಿದ್ದ ದಂಡ ಮತ್ತು ಸಜೆ ಶಿಕ್ಷೆಯನ್ನು ಕೈಬಿಡಲಾಗಿದೆ. |



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 01 ಎಲ್‌ಎಕ್ಯೂ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021

68
U/S
29/1/2021

ಇವರಿಂದ:
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ,
ವಿಕಾಸ ಸೌಧ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ನರೇಂದ್ರ ಆರ್.(ಹನೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 199ಕ್ಕೆ ಉತ್ತರ ನೀಡುವ ಬಗ್ಗೆ.

----

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ನರೇಂದ್ರ ಆರ್ (ಹನೂರು) ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 199ಕ್ಕೆ ಉತ್ತರವನ್ನು ತಯಾರಿಸಿದ್ದು, ಇದರ 25 ಪ್ರತಿಗಳನ್ನು ಇದರೊಂದಿಗೆ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

A.Vijayakumar 28.01.2021

(ಎ.ವಿಜಯಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

28/1/21

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 199
ಸದಸ್ಯರು ಹೆಸರು : ಶ್ರೀ ನರೇಂದ್ರ ಆರ್.(ಹನೂರು)
ಉತ್ತರಿಸುವ ದಿನಾಂಕ : 29.01.2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ್ರ ಸಂ: | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹನೂರು ಪಟ್ಟಣ ಪಂಚಾಯತಿ ಕಛೇರಿಯಲ್ಲಿ ಸಿಬ್ಬಂದಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದಲ್ಲಿ, ಈ ಸಿಬ್ಬಂದಿಗಳನ್ನು ನೇಮಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು (ಸಂಪೂರ್ಣ ವಿವರ ನೀಡುವುದು)?; | ಹನೂರು ಪಟ್ಟಣ ಪಂಚಾಯಿತಿಯಲ್ಲಿ ವಿವಿಧ ವೃಂದದ ಒಟ್ಟು 43 ಹುದ್ದೆಗಳು ಮಂಜೂರಾದ ಹಾಗೂ 17 ನೀರು ಸರಬರಾಜು ವಿಭಾಗದಲ್ಲಿ ಹೆಚ್ಚುವರಿ ಹುದ್ದೆಗಳು ಸೇರಿ ಒಟ್ಟು 60 ಹುದ್ದೆಗಳಿರುತ್ತವೆ.<br><br>ಪ್ರಸ್ತುತ 18 ಖಾಯಂ ಅಧಿಕಾರಿ/ನೌಕರರು ಹಾಗೂ 20 ನೌಕರರು (ಗುತ್ತಿಗೆ/ಹೊರಗುತ್ತಿಗೆ/ ದಿನಗೂಲಿ ಕ್ಷೇಮಾಭಿವೃದ್ಧಿ/ ನೇರಪಾವತಿ ಅಡಿಯಲ್ಲಿ ಒಳಗೊಂಡು) ಒಟ್ಟು 38 ಅಧಿಕಾರಿ/ನೌಕರರು ಕರ್ತವ್ಯ ನಿರ್ವಹಿಸುತ್ತಿದ್ದು, 22 (60-38) ಹುದ್ದೆಗಳು ಖಾಲಿಯಿರುತ್ತದೆ.<br><br>ಈ ಹಿನ್ನಲೆಯಲ್ಲಿ, ಜಿಲ್ಲಾಧಿಕಾರಿಗಳು, ಚಾಮರಾಜನಗರ ಜಿಲ್ಲೆ ರವರು ಅಧಿಕೃತ ಜ್ಞಾಪನ ಸಂಖ್ಯೆ:ಚಾಜಿನಕೋ/ ಸಿಬ್ಬಂದಿ/ ಸಿಆರ್/44/2020-21, ದಿನಾಂಕ 13.08.2020 ರಲ್ಲಿ ಕಿರಿಯ ಅಭಿಯಂತರರು, ಸಮುದಾಯ ಸಂಘಟಕರು, ಹಿರಿಯ ಆರೋಗ್ಯ ನಿರೀಕ್ಷಕರು ಮತ್ತು ದ್ವಿತೀಯ ದರ್ಜೆ ಸಹಾಯಕರು ಹುದ್ದೆಗಳಿಗೆ ಜಿಲ್ಲೆಯಲ್ಲಿನ ಇತರೆ ನಗರ ಸ್ಥಳೀಯ ಸಂಸ್ಥೆಯ ನೌಕರರನ್ನು ವಾರದಲ್ಲಿ 2 ದಿನ ಹನೂರು ಪಟ್ಟಣ ಪಂಚಾಯಿತಿಯಲ್ಲಿ ಕರ್ತವ್ಯ ನಿರ್ವಹಿಸುವಂತೆ ನಿಯೋಜಿಸಿರುತ್ತಾರೆ.<br><br>ರಾಜ್ಯದ ನಗರ ಸ್ಥಳೀಯ ಸಂಸ್ಥೆಗಳಲ್ಲಿ ನೇರ ನೇಮಕಾತಿ ಅಡಿಯಲ್ಲಿ ಖಾಲಿ ಇರುವ ಗ್ರೂಪ್ ಬಿ ವೃಂದದ 4 ಹುದ್ದೆಗಳು ಮತ್ತು ಗ್ರೂಪ್ ಸಿ ವೃಂದದ 544 ಹುದ್ದೆಗಳನ್ನು ಒಳಗೊಂಡಂತೆ ಒಟ್ಟು 548 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗದಲ್ಲಿ ನೇಮಕಾತಿ ಪ್ರಕ್ರಿಯೆಯಲ್ಲಿರುತ್ತದೆ. ಸದರಿ ಹುದ್ದೆಗಳ ಪೈಕಿ ಕರ್ನಾಟಕ ಲೋಕಸೇವಾ ಆಯೋಗದಿಂದ ಒಟ್ಟು 109 ಹುದ್ದೆಗಳಿಗೆ ಅಧಿಸೂಚನೆ ಹೊರಡಿಸಲಾಗಿರುತ್ತದೆ. |

...2

| | | |
|---|---|---|
| | | ಇದಲ್ಲದೆ, ಕರ್ನಾಟಕ ಲೋಕಸೇವಾ ಆಯೋಗದಿಂದ ನಗರ ಸ್ಥಳೀಯ ಸಂಸ್ಥೆಗಳ ವಿವಿಧ ವೃಂದದ ಒಟ್ಟು 464 ಹುದ್ದೆಗಳಿಗೆ ಅಂತಿಮ ಆಯ್ಕೆ ಪಟ್ಟಿ ಸ್ವೀಕೃತವಾಗಿದ್ದು, ಆರ್ಥಿಕ ಇಲಾಖೆಯ ಸುತ್ತೋಲೆ ಸಂಖ್ಯೆ: ಅಇ 03 ಬಿಇಎಂ 2020 ದಿನಾಂಕ: 06.07.2020ರ ಸುತ್ತೋಲೆಯ ರೀತ್ಯ ಎಲ್ಲ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ತಡೆಹಿಡಿಯಲಾಗಿದೆ.<br><br>ಈ ಸಂಬಂಧ ಕರ್ನಾಟಕ ಲೋಕ ಸೇವಾ ಆಯೋಗದಿಂದ ವಿವಿಧ ವೃಂದದ ಹುದ್ದೆಗಳಿಗೆ ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ ಆರ್ಥಿಕ ಇಲಾಖೆಯಿಂದ ಸಹಮತಿ ಕೋರಲಾಗಿರುತ್ತದೆ.<br><br>ನೇಮಕಾತಿ ಪ್ರಕ್ರಿಯೆ ಚಾಲನೆಗೊಂಡ ನಂತರ ಹನೂರು ಪಟ್ಟಣ ಪಂಚಾಯಿತಿಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ನಿಯಮಾನುಸಾರ ಕ್ರಮವಹಿಸಲಾಗುವುದು ಹಾಗೂ ಈಗಾಗಲೇ ಜಿಲ್ಲಾ ಮಟ್ಟದಲ್ಲಿ ಮುಂಬಡ್ತಿ ಖೋಟಾದಡಿಯಲ್ಲಿ ವಿವಿಧ "ಸಿ" ವೃಂದದ ಖಾಲಿ ಹುದ್ದೆಗೆ ಮುಂಬಡ್ತಿಗೆ ಸಂಬಂಧಿಸಿದಂತೆ ನಿರ್ದೇಶನಾಲಯದ ಪತ್ರ ಸಂಖ್ಯೆ: ಇ-243772 ಡಿಎಂಎ ಇಎಸ್‌ಟಿ2 ಎಸ್‌ಡಿಎ 3 2020 ದಿನಾಂಕ 05.08.2020 ಹಾಗೂ ದಿನಾಂಕ 22.01.2021 ರಲ್ಲಿ ಖಾಲಿ ಇರುವ ಹುದ್ದೆಗಳನ್ನು ನಿಯಮನುಸಾರ ಭರ್ತಿ ಮಾಡಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. |

**ಸಂಖ್ಯೆ: ನಅಇ 01** ಎಲ್‌ಎಕ್ಯೂ 2021

(ಎನ್.ನಾಗರಾಜು ಎಂ.ಟಿ.ಬಿ.)
**ಪೌರಾಡಳಿತ ಮತ್ತು ಸಕ್ಕರೆ ಸಚಿವರು**



**ಕರ್ನಾಟಕ ಸರ್ಕಾರ**

ಸಂಖ್ಯೆ ಸಿಐ 30 ಎಂಎಂಎನ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
1ನೇ ಮಹಡಿ, ವಿಕಾಸಸೌಧ,
ಬೆಂಗಳೂರು, ದಿನಾಂಕ 28.01.2021

ಇಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
(ಎಂ.ಎಸ್.ಎಂ.ಇ., ಜವಳಿ ಮತ್ತು ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ

ಮಾನ್ಯರೇ,

ವಿಷಯ : ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 204 ಕ್ಕೆ ಉತ್ತರ ಒದಗಿಸುವ ಕುರಿತು.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.204/2021, ದಿನಾಂಕ 21.01.2021.

-----

ಪ್ರಸ್ತಾಪಿತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 204 ಕ್ಕೆ ಸರ್ಕಾರದ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

(ಶಿವಪ್ರಕಾಶ)
ಪೀಠಾಧಿಕಾರಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪ್ರತಿ:-

1. ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
3. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
4. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 204 |
| ಸದಸ್ಯರ ಹೆಸರು | ಶ್ರೀ ರಘುಪತಿ ಭಟ್ ಕೆ. |
| ಉತ್ತರಿಸಬೇಕಾದ ದಿನಾಂಕ | 29.01.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯಲ್ಲಿ ಮರಳು ದಿಬ್ಬ ತೆರವುಗೊಳಿಸುವ ಕಾರ್ಯ ಫೆಬ್ರವರಿ ಅಂತ್ಯಕ್ಕೆ ಮುಗಿಯುವುದರಿಂದ ಹೊಸದಾಗಿ ಮರಳು ದಿಬ್ಬ ಗುರುತಿಸುವ ಕಾರ್ಯ ಯಾವ ಹಂತದಲ್ಲಿದೆ; (ಸಂಪೂರ್ಣ ವಿವರ ನೀಡುವುದು) | 2019-20 ಮತ್ತು 2020-21ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಕರಾವಳಿ ವಲಯ ನಿರ್ವಹಣಾ ಪ್ರಾಧಿಕಾರ (KSCZMA) ದಿಂದ ಉಡುಪಿ ಜಿಲ್ಲಾ ವ್ಯಾಪ್ತಿಯ ಕರಾವಳಿ ನಿಯಂತ್ರಣ ವಲಯ ನದಿ ಪಾತ್ರಗಳ ವ್ಯಾಪ್ತಿಯಲ್ಲಿ ಗುರುತಿಸಿರುವ 10 ಮರಳು ದಿಬ್ಬಗಳಲ್ಲಿ ಮರಳು ತೆರವುಗೊಳಿಸಲು ದಿನಾಂಕ 11.03.2020 ರಿಂದ ಒಂದು ವರ್ಷದ ಅವಧಿಗೆ ಅನುಮತಿ ದೊರತಿರುತ್ತದೆ. ಸದರಿ ಮರಳು ದಿಬ್ಬಗಳಲ್ಲಿ ಮರಳು ತೆರವುಗೊಳಿಸುವ ಅವಧಿಯು ದಿನಾಂಕ 10.03.2021 ರಂದು ಮುಕ್ತಾಯಗೊಳ್ಳುತ್ತದೆ.<br><br>ಪ್ರಸ್ತುತ ಉಡುಪಿ ಜಿಲ್ಲಾ ವ್ಯಾಪ್ತಿಯ ಕರಾವಳಿ ನಿಯಂತ್ರಣ ವಲಯ ನದಿ ಪಾತ್ರಗಳ ವ್ಯಾಪ್ತಿಯಲ್ಲಿ ಜಿಲ್ಲಾ 07 ಸದಸ್ಯರ ಸಮಿತಿಯಿಂದ 14 ಮರಳು ದಿಬ್ಬಗಳನ್ನು ಗುರುತಿಸಿ, ಬ್ಯಾತಿಮೆಟ್ರಿಕ್ ಸರ್ವೆ ಕಾರ್ಯ ಕೈಗೊಳ್ಳಲಾಗಿದ್ದು, ವರದಿ ಬಂದ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ ಸಿಐ 30 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 30 ಎಂಆರ್‌ಇ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:61ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.61/2021, ದಿನಾಂಕ:21.01.2021.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರ ಬಂಗಾರಪ್ಪ ಎಸ್. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 61ಕ್ಕೆ ದಿನಾಂಕ:29.01.2021ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಉತ್ತರವನ್ನು ಪಿ.ಡಿ.ಎಫ್ ಮಾದರಿಯಲ್ಲಿ ಇ-ಮೇಲ್ ಸಂಖ್ಯೆ: dsqb-kla-kar@nic.in ರ ಮೂಲಕ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್.ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

## ಕರ್ನಾಟಕ ವಿಧಾನಸಭೆ

| | | |
|---|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 61 |
| 2. ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ ಎಸ್ |
| 3. ಉತ್ತರಿಸಬೇಕಾದ ದಿನಾಂಕ | : | 29.01.2021 |
| 4. ಉತ್ತರಿಸುವ ಸಚಿವರು | : | ಸಹಕಾರ ಸಚಿವರು |

***

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಂಜುಂಡಪ್ಪ ವರದಿಯ ಪ್ರಕಾರ ಹಿಂದುಳಿದ ತಾಲ್ಲೂಕಾಗಿರುವ ಸೊರಬದಲ್ಲಿ ಸುಸಜ್ಜಿತ ಸಂತೆ ಮೈದಾನ ನಿರ್ಮಿಸಲು ಈಗಾಗಲೇ 10 ಎಕರೆ ಭೂಮಿಯನ್ನು ಮಂಜೂರಾತಿ ಮಾಡಿದ್ದು, ಸದರಿ ಸ್ಥಳದಲ್ಲಿಯೇ ಸಂತೆಯನ್ನು ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಬಂದಿದ್ದಲ್ಲಿ, ಸದರಿ ಸಂತೆ ಮೈದಾನವನ್ನು ಅಭಿವೃದ್ಧಿಪಡಿಸಲು ಸರ್ಕಾರ ಉದ್ದೇಶಿಸಿದೆಯೇ? (ವಿವರ ನೀಡುವುದು) | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಸೊರಬ ವತಿಯಿಂದ ಸದರಿ ಸಂತೆ ಮೈದಾನವನ್ನು ಅಭಿವೃದ್ಧಿಪಡಿಸುವ ಉದ್ದೇಶ ಪ್ರಸ್ತುತ ಇರುವುದಿಲ್ಲ. |

**ಸಂಖ್ಯೆ:ಸಿಒ 30 ಎಂಆರ್‌ಇ 2021**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 14 ಐಎಪಿ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021.

121
U/S
29/01/2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 81ಕ್ಕೆ ಉತ್ತರಿಸುವ ಬಗ್ಗೆ.

---*---

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 81ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಎನ್. ಕುಮಾರ್

(ಎನ್. ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

28/01/2021

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 81
2. ಸದಸ್ಯರ ಹೆಸರು : ಶ್ರೀ ವೀರಭದ್ರಯ್ಯ ಎಂ.ವಿ. (ಮಧುಗಿರಿ)
3. ಉತ್ತರಿಸುವ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಧುಗಿರಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ಕೈಗಾರಿಕಾ ಪ್ರದೇಶವನ್ನು ಸ್ಥಾಪಿಸಲು ಈ ಹಿಂದಿನ ಸರ್ಕಾರದ ಆಯವ್ಯಯದಲ್ಲಿ ಮಂಜೂರಾತಿ ದೊರೆತಿದ್ದರೂ ಇದುವರೆಗೂ ಕೈಗಾರಿಕಾ ಪ್ರದೇಶವನ್ನು ಸ್ಥಾಪಿಸಲು ಯಾವುದೇ ಕ್ರಮ ಕೈಗೊಳ್ಳದೇ ಇರುವುದಕ್ಕೆ ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳ ವತಿಯಿಂದ ಮಧುಗಿರಿ ತಾಲ್ಲೂಕು, ಕಸಬಾ ಹೋಬಳ, ದೊಡ್ಡವೀರಗೊಂಡನಹಳ್ಳ, ಕಂಬದಹಳ್ಳ ಮತ್ತು ದೊಡ್ಡೇರಿ ಹೋಬಳ, ಮದ್ಲೇರಹಳ್ಳ, ದಬ್ಬೇಘಟ್ಟ ಮತ್ತು ಹರಿಹರಪುರ ಗ್ರಾಮಗಳಲ್ಲಿನ 336-31 ಎಕರೆ ಜಮೀನನ್ನು ಕೈಗಾರಿಕಾ ಪ್ರದೇಶಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಸಿಐ 14 ಐಎಪಿ (ಇ) 2021

(ಜಗದೀಶ ಶೆಟ್ಟರ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು




ಸಂಖ್ಯೆ: ಸಿಒ 15 ಸಿಎಲ್ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

ಏಟಿ ೯೬ 29/01/2021

ಇವರಿಂದ,

**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

ಇವರಿಗೆ,

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಎಸ್.ಎನ್ ನಾರಾಯಣಸ್ವಾಮಿ ಕೆ.ಎಂ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 126 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಎಸ್.ಎನ್ ನಾರಾಯಣಸ್ವಾಮಿ ಕೆ.ಎಂ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 126 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Radha H.C

(ಹೆಚ್.ಸಿ. ರಾಧ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಎಸ್.ಎನ್ ನಾರಾಯಣಸ್ವಾಮಿ ಕೆ.ಎಂ
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 126
ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆಯಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಸಹಕಾರಿ ಸಂಘಗಳ ಸಂಖ್ಯೆ ಎಷ್ಟು; ಈ ಪೈಕಿ ಎ.ಬಿ.ಸಿ ವರ್ಗಗಳಲ್ಲಿ ಬರುವ ಸಂಘಗಳೆಷ್ಟು; ಇವುಗಳ ಆರ್ಥಿಕ ಪರಿಮಿತಿಯ ವಿವರಗಳನ್ನು ಒದಗಿಸುವುದು; | ಕೋಲಾರ ಜಿಲ್ಲೆಯಲ್ಲಿ ದಿನಾಂಕ: 31-03-2020ಕ್ಕೆ ಇದ್ದಂತೆ ಒಟ್ಟು 1574 ಸಹಕಾರ ಸಂಘಗಳಿರುತ್ತವೆ. ಈ ಪೈಕಿ 1340 ಕಾರ್ಯನಿರತ ಸಹಕಾರ ಸಂಘಗಳು ಹಾಗೂ 234 ಸಹಕಾರ ಸಂಘಗಳು ಸಮಾಪನೆ ಸ್ಥಿತಿಯಲ್ಲಿರುತ್ತವೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಅಧಿನಿಯಮಗಳ 1959ರ ನಿಯಮ 29(ಬಿ)(3)ರನ್ವಯ ಸಂಘದ ದುಡಿಯುವ ಬಂಡವಾಳ/ವ್ಯಾಪಾರ ವಹಿವಾಟುಗಳ ಆರ್ಥಿಕ ಪರಿಮಿತಿಗೆ ಒಳಪಟ್ಟು ಜಿಲ್ಲೆಯ ಕಾರ್ಯನಿರತ ಸಹಕಾರ ಸಂಘಗಳನ್ನು ಕೆಳಕಂಡಂತೆ ಎ, ಬಿ ಮತ್ತು ಸಿ ವರ್ಗಗಳಾಗಿ ವಿಂಗಡಿಸಲಾಗಿದೆ. |

| ವರ್ಗ | ಪರಿಮಿತಿ | ಸಹಕಾರ ಸಂಘಗಳ ಸಂಖ್ಯೆ |
|---|---|---|
| ಎ | ರೂ.25 ಕೋಟಿಗಿಂತಲೂ ಹೆಚ್ಚು ದುಡಿಯುವ ಬಂಡವಾಳ ಹೊಂದಿರುವ ಸಂಘಗಳು | 02 |
| ಬಿ | ರೂ.10 ಕೋಟಿಗಿಂತ ಹೆಚ್ಚು ಹಾಗೂ ರೂ.25 ಕೋಟಿಗಿಂತ ಕಡಿಮೆ ದುಡಿಯುವ ಬಂಡವಾಳ ಹೊಂದಿರುವ ಸಹಕಾರ ಸಂಘಗಳು | 03 |
| ಸಿ | ರೂ.10 ಕೋಟಿಗಿಂತ ಕಡಿಮೆ ದುಡಿಯುವ ಬಂಡವಾಳ ಹೊಂದಿರುವ ಸಹಕಾರ ಸಂಘಗಳು | 1569 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಎಷ್ಟು ಜನ ರೈತ ಫಲಾನುಭವಿಗಳಿಗೆ ಶೂನ್ಯ ಬಡ್ಡಿ ದರದಲ್ಲಿ ಸಾಲ ವಿತರಿಸಲಾಗಿದೆ; ಸಾಲಕ್ಕಾಗಿ ನೀಡಿದ ಮೊತ್ತ ಎಷ್ಟು; (ವಿವರಗಳನ್ನು ಒದಗಿಸುವುದು) | ಕಳೆದ ಮೂರು ವರ್ಷಗಳ ಸಾಲ ವಿತರಣೆ ವಿವರ ಕೆಳಕಂಡಂತಿರುತ್ತದೆ. |

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ತಾಲ್ಲೂಕಿನ ಹೆಸರು | 2017-18ನೇ ಸಾಲಿನಲ್ಲಿ ರೈತರಿಗೆ ಶೂನ್ಯ ಬಡ್ಡಿ ದರದಲ್ಲಿ ವಿತರಿಸಿರುವ | | 2018-19 ಸಾಲಿನಲ್ಲಿ ರೈತರಿಗೆ ಶೂನ್ಯ ಬಡ್ಡಿ ದರದಲ್ಲಿ ವಿತರಿಸಿರುವ | | 2019-20 ಸಾಲಿನಲ್ಲಿ ರೈತರಿಗೆ ಶೂನ್ಯ ಬಡ್ಡಿ ದರದಲ್ಲಿ ವಿತರಿಸಿರುವ | | 2020-21 ಡಿಸೆಂಬರ್ ಅಂತ್ಯದವರೆಗೆ ಸಾಲಿನಲ್ಲಿ ರೈತರಿಗೆ ಶೂನ್ಯ ಬಡ್ಡಿ ದರದಲ್ಲಿ ವಿತರಿಸಿರುವ | |
|---|---|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಕೋಲಾರ | 2702 | 3686.03 | 2400 | 3332.48 | 3397 | 4679.05 | 2588 | 2804.87 |
| 2 | ಮಾಲೂರು | 1267 | 2040.65 | 964 | 1637.00 | 1853 | 2933.77 | 1451 | 1850.29 |
| 3 | ಬಂಗಾರಪೇಟೆ | 1298 | 1748.45 | 1100 | 1598.20 | 1720 | 2268.79 | 2252 | 2238.34 |
| 4 | ಕೆ.ಜಿ.ಎಫ್ | 1826 | 2291.54 | 468 | 733.27 | 1069 | 1413.08 | 844 | 909.09 |
| 5 | ಮುಳಬಾಗಿಲು | 1556 | 1734.11 | 1652 | 1886.58 | 2161 | 2543.96 | 854 | 840.17 |
| 6 | ಶ್ರೀನಿವಾಸಪುರ | 1086 | 1293.50 | 719 | 884.42 | 1185 | 1431.87 | 1150 | 1309.01 |
| | ಒಟ್ಟು | 9735 | 12794.28 | 7303 | 10071.95 | 11385 | 15270.52 | 9139 | 9951.77 |

ಇ) ಮಹಿಳಾ ಸ್ವಸಹಾಯ ಸಂಘಗಳಿಗೆ ನೀಡಲಾದ ಸಾಲ ಎಷ್ಟು ಮತ್ತು ಸಹಾಯಧನ ಮೊತ್ತ ಎಷ್ಟು ; (ವಿವರಗಳನ್ನು ನೀಡುವುದು)

ಕಳೆದ ಮೂರು ವರ್ಷಗಳಲ್ಲಿ ಮಹಿಳಾ ಸ್ವಸಹಾಯ ಗುಂಪುಗಳಿಗೆ ವಿತರಿಸಲಾದ ಸಾಲದ ವಿವರ ತಾಲ್ಲೂಕುವಾರು ಈ ಕೆಳಕಂಡಂತಿರುತ್ತದೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ತಾಲ್ಲೂಕಿನ ಹೆಸರು | 2017-18ನೇ ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಸಾಲ ವಿತರಿಸಿರುವ | | 2018-19 ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಸಾಲ ವಿತರಿಸಿರುವ | | 2019-20 ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಸಾಲ ವಿತರಿಸಿರುವ | | 2020-21 ಡಿಸೆಂಬರ್ ಅಂತ್ಯದವರೆಗೆ ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಸಾಲ ವಿತರಿಸಿರುವ | |
|---|---|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಕೋಲಾರ | 1955 | 7932.60 | 749 | 2920.07 | 1609 | 7769.18 | 828 | 3822.26 |
| 2 | ಮಾಲೂರು | 958 | 3849.38 | 251 | 1014.28 | 509 | 2176.37 | 294 | 1352.85 |
| 3 | ಬಂಗಾರಪೇಟೆ | 916 | 3621.48 | 457 | 1633.88 | 809 | 3725.60 | 202 | 883.38 |
| 4 | ಕೆ.ಜಿ.ಎಫ್ | 2338 | 8379.83 | 739 | 2544.77 | 1064 | 4697.70 | 530 | 2594.39 |
| 5 | ಮುಳಬಾಗಿಲು | 1582 | 5660.59 | 608 | 2581.05 | 1117 | 5146.57 | 576 | 2792.54 |
| 6 | ಶ್ರೀನಿವಾಸಪುರ | 2202 | 7327.49 | 284 | 1042.92 | 1154 | 5294.96 | 386 | 1872.96 |
| | ಒಟ್ಟು | 9951 | 36771.37 | 3088 | 11736.97 | 6262 | 28810.38 | 2816 | 13318.38 |

ಕಳೆದ ಮೂರು ವರ್ಷಗಳಲ್ಲಿ ಮಹಿಳಾ ಸ್ವಸಹಾಯ ಗುಂಪುಗಳಿಗೆ ಶೂನ್ಯ ಬಡ್ಡಿದರದಲ್ಲಿ ನೀಡಲಾದ ಸಾಲಕ್ಕೆ ರಾಜ್ಯ ಸರ್ಕಾರದಿಂದ ಮತ್ತು ಕೇಂದ್ರ ಸರ್ಕಾರದ ಎನ್.ಆರ್.ಎಲ್.ಎಂ ಯೋಜನೆಯಡಿ ಸರ್ಕಾರಕ್ಕೆ ಸಲ್ಲಿಸಿರುವ ಬಡ್ಡಿ ಸಹಾಯಧನ ಕ್ಲೈಂ ಬಿಲ್ಲಿನ ಮೊತ್ತ, ಸರ್ಕಾರದಿಂದ ಬಿಡುಗಡೆಯಾಗಿರುವ ಮೊತ್ತ ಮತ್ತು ಬಿಡುಗಡೆಗೆ ಬಾಕಿ ಇರುವ ಮೊತ್ತದ ವಿವರ ತಾಲ್ಲೂಕುವಾರು ಈ ಕೆಳಕಂಡಂತಿರುತ್ತದೆ.

1) 2017-18ನೇ ಸಾಲಿನ ವಿವರ

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ತಾಲ್ಲೂಕಿನ ಹೆಸರು | 2017-18ನೇ ರಾಜ್ಯ ಸರ್ಕಾರಕ್ಕೆ ಕ್ಲೈಂ ಸಲ್ಲಿಸಿರುವ ಬಡ್ಡಿ ಸಹಾಯಧನ ಮೊತ್ತ | 2017-18 ಸಾಲಿನಲ್ಲಿ ಎನ್.ಆರ್.ಎಲ್.ಎಂ. ಯೋಜನೆಯಡಿ ಕೇಂದ್ರ ಸರ್ಕಾರಕ್ಕೆ ಕ್ಲೈಂ ಸಲ್ಲಿಸಿರುವ ಮೊತ್ತ | ರಾಜ್ಯ ಸರ್ಕಾರದಿಂದ ಬಿಡುಗಡೆಯಾಗಿರುವ ಮೊತ್ತ | ಎನ್.ಆರ್.ಎಲ್ ಎಂ. ಯೋಜನೆಯಡಿ ಬಿಡುಗಡೆಯಾಗಿರುವ ಮೊತ್ತ | ರಾಜ್ಯ ಸರ್ಕಾರದಿಂದ ಬಿಡುಗಡೆಗೆ ಬಾಕಿ ಇರುವ ಮೊತ್ತ | ಎನ್.ಆರ್.ಎಲ್ ಎಂ. ಯೋಜನೆಯಡಿ ಬಿಡುಗಡೆಗೆ ಬಾಕಿ ಇರುವ ಮೊತ್ತ |
|---|---|---|---|---|---|---|---|
| 1 | ಕೋಲಾರ | 241.75 | 122.90 | 122.90 | 0.00 | 0.00 | 122.90 |
| 2 | ಮಾಲೂರು | 99.08 | 45.09 | 45.09 | 0.00 | 0.00 | 45.09 |
| 3 | ಬಂಗಾರಪೇಟೆ | 117.05 | 56.39 | 56.39 | 0.00 | 0.00 | 56.39 |
| 4 | ಕೆ.ಜಿ.ಎಫ್ | 227.90 | 122.76 | 122.76 | 0.00 | 0.00 | 122.76 |
| 5 | ಮುಳಬಾಗಿಲು | 124.36 | 59.39 | 59.39 | 0.00 | 0.00 | 59.39 |
| 6 | ಶ್ರೀನಿವಾಸಪುರ | 178.05 | 102.63 | 102.63 | 0.00 | 0.00 | 102.63 |
| | ಒಟ್ಟು | 988.19 | 509.16 | 509.16 | 0.00 | 0.00 | 509.16 |




ಸಂಖ್ಯೆ: ಸಿಒ 17 ಸಿಎಲ್ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

ಇವರಿಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು – 560 001.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 213 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 213 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Radha H.C

(ಹೆಚ್.ಸಿ. ರಾಧ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

U/1 100 29/01/21

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಶಿವಾನಂದ ಎಸ್. ಪಾಟೀಲ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 213

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2020-21 ನೇ ಸಾಲಿಗೆ ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಘಗಳು ರಿಯಾಯಿತಿ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ವಿತರಿಸಲು ಸರ್ಕಾರ ಆದೇಶ ಹೊರಡಿಸಲಾಗಿದೆಯೇ; | ಹೌದು, ಹೊರಡಿಸಲಾಗಿದೆ. 2020-21 ನೇ ಸಾಲಿನಲ್ಲಿ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು, ರಿಯಾಯಿತಿ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ನೀಡುವ ಬಗ್ಗೆ ಸರ್ಕಾರದ ಆದೇಶ ದಿ:07.10.2020 ರಂದು ಹೊರಡಿಸಲಾಗಿದೆ. |
| ಆ) | ಹಾಗಿದ್ದಲ್ಲಿ ಸರ್ಕಾರ ಯಾವ ಷರತ್ತುಗಳನ್ನು ವಿಧಿಸಿ ಸಾಲ ವಿತರಿಸಲು ಆದೇಶಿಸಿರುತ್ತದೆ; | 2020-21 ನೇ ಸಾಲಿನಲ್ಲಿ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು, ರಿಯಾಯಿತಿ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ನೀಡುವ ಬಗ್ಗೆ ಹೊರಡಿಸಲಾಗಿರುವ ಸರ್ಕಾರಿ ಆದೇಶ ಸಂಖ್ಯೆ ಸಿಒ 272 ಸಿಎಲ್‌ಎಸ್ 2020, ದಿ:07.10.2020 ರ ಪ್ರತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |
| ಇ) | ಸರ್ಕಾರದ ಆದೇಶದಲ್ಲಿ ವಿಧಿಸಿರುವ ಷರತ್ತುಗಳಲ್ಲಿ ಒಂದು ಕುಟುಂಬಕ್ಕೆ ಗರಿಷ್ಠ 10.00 ಲಕ್ಷಗಳವರೆಗಿನ ಸಾಲ ಮತ್ತು 2020-21 ರಲ್ಲಿ ಸಾಲ ಪಡೆಯಲು ಇಚ್ಛಿಸುವ ರೈತನು ಹೊಂದಿರುವ ಪಡಿತರ ಚೀಟಿಯಲ್ಲಿರುವ ಸದಸ್ಯರು ದಿ.1-4-2004 ರಿಂದ ರೂ.4.00 ಲಕ್ಷಗಳ ಸಾಲ ಪಡೆದು ಈಗಾಗಲೇ ಬಡ್ಡಿ ಸಹಾಯಧನ ಪಡೆದಿದ್ದರೆ ಅಂತಹ ಕುಟುಂಬದ ಸದಸ್ಯನಿಗೆ ರಿಯಾಯಿತಿ ಬಡ್ಡಿ ದರದ ಸಾಲ ಅನ್ವಯವಾಗುವುದಿಲ್ಲ ಎಂಬ ಷರತ್ತಿನೊಂದಿಗೆ ಸಾಲ ವಿಧಿಸಲು ಕ್ರಮ ಕೈಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಈ) | ಹಾಗಿದ್ದಲ್ಲಿ, ರೈತರ ಹಿತ ದೃಷ್ಟಿಯಿಂದ ಸಾಲ ವಿತರಿಸಲು ವಿಧಿಸಲು ಷರತ್ತುಗಳನ್ನು ಕೈಬಿಡಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? (ವಿವರ ನೀಡುವುದು) | 2020-21 ನೇ ಸಾಲಿನಲ್ಲಿ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು, ರಿಯಾಯಿತಿ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲ ನೀಡುವ ಬಗ್ಗೆ ಹೊರಡಿಸಲಾಗಿರುವ ಸರ್ಕಾರಿ ಆದೇಶದಲ್ಲಿನ ಷರತ್ತು ಸಂಖ್ಯೆ 2 ರಲ್ಲಿ ಒಂದು ಕುಟುಂಬಕ್ಕೆ ಗರಿಷ್ಠ ರೂ.10.00 ಲಕ್ಷಗಳ ಸಾಲದ ಮಿತಿ |

| | | |
|---|---|---|
| | | ನಿಗದಿಪಡಿಸಿರುವುದು, ಷರತ್ತು ಸಂಖ್ಯೆ 3 ರಲ್ಲಿ ಒಂದು ಕುಟುಂಬಕ್ಕೆ ಗರಿಷ್ಠ ರೂ.4.00 ಲಕ್ಷಗಳ ಬಡ್ಡಿ ಸಹಾಯಧನವನ್ನು ನಿಗದಿಪಡಿಸಿರುವುದು ಮತ್ತು ಷರತ್ತು ಸಂಖ್ಯೆ 6 ರಲ್ಲಿ ರೈತನ ವಾಸ ಮತ್ತು ಭೂಮಿ ಬೇರೆ ಬೇರೆ ಸಂಘದ ವ್ಯಾಪ್ತಿಯಲ್ಲಿದ್ದರೆ ರೈತನು ವಾಸಿಸುವ ಸಂಘದ ವ್ಯಾಪ್ತಿಯಲ್ಲಿ ಸಾಲ ಪಡೆಯಬೇಕು ಎಂಬ ಷರತ್ತುಗಳನ್ನು ವಿಧಿಸಲಾಗಿದೆ. ಕಾರಣ ಹೆಚ್ಚಿನ ಸಂಖ್ಯೆಯ ರೈತ ಸದಸ್ಯರಿಗೆ ಸರ್ಕಾರದ ಬಡ್ಡಿ ಸಹಾಯಧನದ ಸೌಲಭ್ಯ ದೊರೆಯಬೇಕೆಂದು ಹಾಗೂ ಒಬ್ಬನೇ ರೈತ ಒಂದಕ್ಕಿಂತ ಹೆಚ್ಚಿನ ಸ್ಥಳಗಳಲ್ಲಿ ಭೂಮಿ ಹೊಂದಿದಲ್ಲಿ, ಕೃಷಿ ಭೂಮಿ ಹೊಂದಿರುವ ಎಲ್ಲಾ ಸ್ಥಳಗಳಲ್ಲಿಯೂ ಸರ್ಕಾರದ ಬಡ್ಡಿ ಸಹಾಯಧನ ಪಡೆಯುವುದನ್ನು ತಪ್ಪಿಸಿ, ಸರ್ಕಾರದ ಯೋಜನೆಯ ಸವಲತ್ತು ರಾಜ್ಯದ ಎಲ್ಲಾ ರೈತರಿಗೂ ತಲುಪಿಸಲು ಉದ್ದೇಶಿಸಿ ಷರತ್ತುಗಳನ್ನು ವಿಧಿಸಿ ಸರ್ಕಾರದ ಆದೇಶ ಹೊರಡಿಸಲಾಗಿತ್ತು.<br><br>ಆದರೆ, ಈ ಷರತ್ತುಗಳನ್ನು ಮಾರ್ಪಡಿಸಲು ಪಿಕಾರ್ಡ್ ಬ್ಯಾಂಕುಗಳು ಮತ್ತು ಡಿಸಿಸಿ ಬ್ಯಾಂಕುಗಳ ಆಡಳಿತ ಮಂಡಳಿಗಳ ಸದಸ್ಯರುಗಳಿಂದ ಮನವಿಗಳು ಬಂದಿರುತ್ತವೆ.<br><br>ಈ ಷರತ್ತುಗಳಿಗೆ ವಿನಾಯಿತಿ ನೀಡಿ ಪ್ರತೀ ಸದಸ್ಯನಿಗೆ ರೂ.10.00 ಲಕ್ಷಗಳ ಸಾಲ ಮತ್ತು ಸದಸ್ಯನ ವಾಸ ಮತ್ತು ಭೂಮಿ ಬೇರೆ ಬೇರೆ ಸಂಘದ ವ್ಯಾಪ್ತಿಯಲ್ಲಿದ್ದಲ್ಲಿ ಒಂದು ಸಂಘದಲ್ಲಿ ಮಾತ್ರ ಸಾಲ ಪಡೆಯಲು ಷರತ್ತುಗಳನ್ನು ಮಾರ್ಪಡಿಸುವ ಬಗ್ಗೆ ಅನುಮೋದನೆ ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. |

**ಸಂಖ್ಯೆ: ಸಿಒ 17 ಸಿಎಲ್ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು




ಸಂಖ್ಯೆ: ಸಿಒ 16 ಸಿಎಲ್ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

4/ 131
29/01/2021

ಇವರಿಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬೆಂಗಳೂರು – 560 001.

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಯತೀಂದ್ರ ಸಿದ್ದರಾಮಯ್ಯ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 134 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಯತೀಂದ್ರ ಸಿದ್ದರಾಮಯ್ಯ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 134 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Radha H C

(ಹೆಚ್.ಸಿ. ರಾಧ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಯತೀಂದ್ರ ಸಿದ್ದರಾಮಯ್ಯ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 134

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ಜಿಲ್ಲೆಯಲ್ಲಿ ರಾಜ್ಯದ ಸಹಕಾರಿ ಬ್ಯಾಂಕುಗಳಿಂದ ಸಾಲ ಮನ್ನಾ ಯೋಜನೆಯಲ್ಲಿ ನಡೆದಿರುವ ಅಕ್ರಮಗಳು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅಂತಹ ಎಷ್ಟು ಪ್ರಕರಣಗಳನ್ನು ಗುರುತಿಸಲಾಗಿದೆ; (ವಿವರ ನೀಡುವುದು) | ಹೌದು.<br><br>ರಾಜ್ಯ ಸರ್ಕಾರದ 2017-2018 ನೇ ಸಾಲಿನ ರೂ.50,000/- ಗಳ ಸಾಲ ಮನ್ನಾ ಯೋಜನೆಯಡಿ ಮೈಸೂರು ಜಿಲ್ಲೆಯ ಹೆಚ್.ಡಿ.ಕೋಟೆ ತಾಲ್ಲೂಕಿನ ಅಂತರಸಂತೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತದಲ್ಲಿ ಒಂದು ಪ್ರಕರಣವನ್ನು ಗುರುತಿಸಲಾಗಿದೆ.<br><br>ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು ಒಂದಕ್ಕಿಂತ ಹೆಚ್ಚು ಬಾರಿ ಸರ್ಕಾರದಿಂದ ರೈತರ ಹೆಸರಿನಲ್ಲಿ ಸಾಲಮನ್ನಾ ಕ್ಲೇಂ ಮಾಡಿರುತ್ತಾರೆಂದು ದೂರು ಸ್ವೀಕೃತವಾದ ಹಿನ್ನಲೆಯಲ್ಲಿ ದೂರು ಅರ್ಜಿಗಳ ಪರಿಶೀಲನೆಗೆ ಹಾಸನ ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು ಮತ್ತು ಹಾಸನ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರ ತಂಡವನ್ನು ರಚಿಸಿ ಪರಿಶೀಲನೆಗೆ ಒಳಪಡಿಸಲಾಗಿತ್ತು. ಸದರಿ ತಂಡವು ಸಂಘಕ್ಕೆ ಭೇಟಿ ನೀಡಿ ಪರಿಶೀಲನೆ ನಡೆಸಿ ಸುಮಾರು 112 ರೈತರ ಹೆಸರಿನಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ರೂ.50,000/-ಗಳ ಸಾಲಮನ್ನಾ ಕ್ಲೇಂ ಮಾಡಿರುವ ಬಗ್ಗೆ ಪ್ರಾಥಮಿಕ ವರದಿ ಸಲ್ಲಿಸಿದ್ದು, ಪ್ರಕರಣವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 64 ರ ಶಾಸನಬದ್ಧ ವಿಚಾರಣೆಗೆ ಒಳಪಡಿಸಲಾಗಿದೆ. ವಿಚಾರಣಾಧಿಕಾರಿಗಳ ವರದಿಯ ರೀತ್ಯಾ 106 ರೈತರ ಹೆಸರಿನಲ್ಲಿ ರೂ.54.62 ಲಕ್ಷ ಹೆಚ್ಚುವರಿಯಾಗಿ ಕ್ಲೇಂ ಮಾಡಿರುವುದಾಗಿ ಕಂಡು ಬಂದಿರುತ್ತದೆ. ಹೆಚ್ಚುವರಿ ಕ್ಲೇಂ ಮಾಡಲಾದ ಮೊತ್ತದಲ್ಲಿ ರೂ.51.27 ಲಕ್ಷ ವಸೂಲಾಗಿದ್ದು, ಅಸಲು ರೂ.3.35 ಲಕ್ಷ ಮತ್ತು ಬಡ್ಡಿ ರೂ.3.83 ಲಕ್ಷ ವಸೂಲಿಗೆ ಬಾಕಿಯಿರುತ್ತದೆ. |
| (ಆ) | ಈ ರೀತಿ ಗುರುತಿಸಲಾದ ಸಂಘಗಳ ಮೇಲೆ ಸರ್ಕಾರವು ಯಾವ ಕ್ರಮ ತೆಗೆದುಕೊಂಡಿದೆ; ತನಿಖೆ ನಡೆಯುತ್ತಿದ್ದಲ್ಲಿ ಯಾವ ಹಂತದಲ್ಲಿದೆ? (ವಿವರ ನೀಡುವುದು) | ಸಂಘದ ಸಿಬ್ಬಂದಿ ವಿರುದ್ಧ ಶಿಸ್ತು ಕ್ರಮಕ್ಕೆ ಆಂತರಿಕ ವಿಚಾರಣೆ ಜರುಗಿಸಲು ವಿಚಾರಣಾಧಿಕಾರಿ ನೇಮಕ ಮಾಡಿದ್ದು ವಿಚಾರಣೆ ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ: ಸಿಒ 16 ಸಿಎಲ್ಎಸ್ 2021

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 05 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 29.01.2021.

UI 124
29/01/2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ವೆಂಕಟರಮಣಯ್ಯ.ಟಿ. (ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 107ಕ್ಕೆ ಉತ್ತರ ಕಳುಹಿಸುವ ಬಗ್ಗೆ.

~** **~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ವೆಂಕಟರಮಣಯ್ಯ.ಟಿ(ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 107ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಲತಾ.ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ



## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 107 |
| ಸದಸ್ಯರ ಹೆಸರು : | ಶ್ರೀ ವೆಂಕಟರಮಣಯ್ಯ.ಟಿ (ದೊಡ್ಡಬಳ್ಳಾಪುರ) |
| ಉತ್ತರಿಸಬೇಕಾದ ದಿನಾಂಕ : | 29-01-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ನಗರಸಭೆಯ 31 ವಾರ್ಡ್‌ಗಳಲ್ಲಿ ಹೆಚ್ಚಿನ ರಸ್ತೆಗಳು ಕಿರಿದಾಗಿದ್ದು, ಸಾರ್ವಜನಿಕ ವಾಹನಗಳ ಮುಕ್ತ ಸಂಚಾರಕ್ಕೆ ರಸ್ತೆ ಅಗಲೀಕರಣ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಪ್ರಸ್ತುತ ಸರ್ಕಾರದಲ್ಲಿ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಸದರಿ ವಿಷಯದ ಬಗ್ಗೆ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರಿಂದ ಪ್ರಸ್ತಾವನೆ ಬಂದಲ್ಲಿ ಅನುದಾನದ ಲಭ್ಯತೆಯನುಸಾರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ 5 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು – 560001.
ದೂ. 080–22034625 ಫ್ಯಾಕ್ಸ್: 080–22353932

ಸಂಖ್ಯೆ: ಸಿಐ 34 ಎಸ್‌ಪಿಐ 2021

ದಿನಾಂಕ 29.01.2021

107
U/S
29/1/2021

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ,
ಬೆಂಗಳೂರು–01.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ಅಂಚೆ ಪೆಟ್ಟಿಗೆ ಸಂಖ್ಯೆ: 5074,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ. (ಮಂಡ್ಯ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 222ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.222/2021, ದಿನಾಂಕ 21.01.2021.

*****

ದಿನಾಂಕ 29.01.2021 ರಂದು ಉತ್ತರಿಸಬೇಕಾದ ಮೇಲ್ಕಾಣಿಸಿದ ವಿಧಾನಸಭೆಯ ಪ್ರಶ್ನೆಗೆ ಉತ್ತರಗಳ 50 ಪ್ರತಿಗಳನ್ನು ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

G. Nagarathnamma. 29/1/2021
(ನಾಗರತ್ನಮ್ಮ .ಜಿ)
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 222

ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮಂಡ್ಯ ವಿಧಾನಸಭಾ ಕ್ಷೇತ್ರದಲ್ಲಿ ಯಾವುದೇ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಘಟಕಗಳು ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2013-14 ರಿಂದೀಚೆಗೆ ಮಂಡ್ಯ ಜಿಲ್ಲೆಯಲ್ಲಿ ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿ ಮತ್ತು ರಾಜ್ಯ ಮಟ್ಟದ ಏಕ ಗವಾಕ್ಷಿ ಅನುಮೋದನಾ ಸಮಿತಿ ಸಭೆಗಳಲ್ಲಿ ಒಟ್ಟು 34 ಯೋಜನೆಗಳು ಅನುಮೋದನೆಗೊಂಡಿರುತ್ತವೆ. ಇವುಗಳಿಂದ ರೂ.2028 ಕೋಟಿ ಬಂಡವಾಳ ಹೂಡಿಕೆಯಾಗಲಿದ್ದು, 12107 ಉದ್ಯೋಗವಕಾಶಗಳು ಸೃಜನೆಯಾಗಲಿದೆ. ಈ ಪೈಕಿ 6 ಯೋಜನೆಗಳು ಅನುಷ್ಠಾನಗೊಂಡಿದ್ದು, 193.90 ಕೋಟಿ ಬಂಡವಾಳ ಹೂಡಿಕೆಯಾಗಿದ್ದು, 3399 ಜನರಿಗೆ ಉದ್ಯೋಗವಕಾಶ ನೀಡಲಾಗಿದೆ. |
| ಆ | ಸದರಿ ಕ್ಷೇತ್ರದಲ್ಲಿ ಸಾಕಷ್ಟು ಭೂ ಪ್ರದೇಶಗಳು ಲಭ್ಯವಿದ್ದರು ಸಹ ಮಂಡ್ಯ ನಗರವನ್ನು ನಿರ್ಲಕ್ಷಿಸಲು ಕಾರಣವೇನು; | ಮೇಲ್ಕಂಡ ವಿವರಗಳಂತೆ ಕ್ರಮವಹಿಸಿರುವುದರಿಂದ ಅನ್ವಯಿಸುವುದಿಲ್ಲ. |
| ಇ | ಕೈಗಾರಿಕಾ ಘಟಕಗಳನ್ನು ಸ್ಥಾಪಿಸಲು ಕೈಗೊಂಡಿರುವ ಸರ್ಕಾರದ ಕ್ರಮವೇನು? | ರಾಜ್ಯದಲ್ಲಿ ಹೊಸದಾಗಿ ಕೈಗಾರಿಕೆಗಳನ್ನು ಪ್ರಾರಂಭಿಸಲು ಸರ್ಕಾರವು ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>• ಕೈಗಾರಿಕೆಗಳನ್ನು ಸ್ಥಾಪಿಸುವವರಿಗೆ ಸಹಾಯಧನ ಮತ್ತು ರಿಯಾಯಿತಿಗಳನ್ನು ನೀಡುವ ಬಗ್ಗೆ ಕೈಗಾರಿಕಾ ನೀತಿ 2020-25ನ್ನು ಹೊರತರಲಾಗಿದೆ.<br>• ದೇಶ ವಿದೇಶಗಳ ಹಲವಾರು ಪ್ರತಿಷ್ಠಿತ ಕಂಪನಿಗಳೊಂದಿಗೆ ಕರ್ನಾಟಕದಲ್ಲಿ ಬಂಡವಾಳ ಹೂಡಲು ಮಾನ್ಯ ಕೈಗಾರಿಕಾ ಸಚಿವರ/ಪ್ರಧಾನ ಕಾರ್ಯದರ್ಶಿಗಳ/ಕೈಗಾರಿಕಾಭಿವೃದ್ಧಿ ಆಯುಕ್ತರ ನೇತೃತ್ವದಲ್ಲಿ ಸರಣಿ ಸಭೆಗಳನ್ನು ನಡೆಸಲಾಗುತ್ತಿದೆ.<br>• ಕೈಗಾರಿಕೆಗಳನ್ನು ಪ್ರಾರಂಭಿಸಲು ಬೇಕಾಗಿರುವ ಭೂಮಿ ಖರೀದಿ ಪ್ರಕ್ರಿಯೆ ಸರಳೀಕರಣಗೊಳಿಸಲಾಗಿದೆ. |

| | | |
|---|---|---|
| | | • ಕೈಗಾರಿಕೆಗಳನ್ನು ಪ್ರಾರಂಭಿಸಲು ಬೇಕಾಗಿರುವ ಎನ್.ಒ.ಸಿಗಳನ್ನು ಪಡೆಯಲು 3 ವರ್ಷಗಳವರೆಗೆ ಸಮಯವನ್ನು ವಿಸ್ತರಿಸಿ ಕರ್ನಾಟಕ ಕೈಗಾರಿಕೆಗಳ (ಸೌಲಭ್ಯ) ಅಧಿನಿಯಮ 2002ಕ್ಕೆ ತಿದ್ದುಪಡಿ ತರಲಾಗಿದೆ.<br>• ಕೈಗಾರಿಕೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಕಾರ್ಮಿಕ ಕಾನೂನನ್ನು ಸರಳೀಕರಣ ಗೊಳಿಸಲಾಗಿದೆ.<br><br>ಕೈಗಾರಿಕೆಗಳನ್ನು ಶೀಘ್ರವಾಗಿ ಅಡೆತಡೆಗಳಿಲ್ಲದೆ, ಪ್ರಾರಂಭಿಸಲು ಇಸ್ ಆಫ್ ಡೂಯಿಂಗ್ ಬಿಸಿನೆಸ್ ಜಾರಿಗೊಳಿಸಲಾಗಿದೆ. |

ಸಿಐ 34 ಎಸ್‌ಪಿಐ 2021

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 03 ಎಲ್ಎಕ್ಯೂ 2021.

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29/01/2021.

ಇವರಿಂದ
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಇವರಿಗೆ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಪ್ರಶ್ನೆ ಸಂಖ್ಯೆ 42 ಕ್ಕೆ ಉತ್ತರಿಸುವ ಬಗ್ಗೆ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 42 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಹಾಗೂ Soft Copy ಯನ್ನು email ID: questionskla@karnataka.gov.in ಇಲ್ಲಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

A. Vijayakumar
29-01-2021
(ಎ ವಿಜಯ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಎಂಎ-1&3)



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 42

ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಉತ್ತರಿಸುವ ದಿನಾಂಕ : 29/01/2021

ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಳಗಾವಿ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ದೊಡ್ಡವಾಡ ಹಾಗೂ ಬೆಳವಡಿ ಗ್ರಾಮ ಪಂಚಾಯಿತಿಗಳು ಅತೀ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಸಾರ್ವಜನಿಕರು ಹಾಗೂ ಆಡಳಿತ ಹಿತದೇಷ್ಟಿಯಿಂದ ಈ ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಗಳನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಸವದತ್ತಿ ತಾಲ್ಲೂಕಿನ ದೊಡ್ಡವಾಡ ಮತ್ತು ಬೆಳವಡಿ ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆ ಹಾಗೂ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು ರವರಿಂದ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| (ಇ) | ಇದ್ದಲ್ಲಿ, ಈ ಗ್ರಾಮ ಪಂಚಾಯಿತಿಗಳನ್ನು ಪಟ್ಟಣ ಪಂಚಾಯಿತಿಗಳನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಪಟ್ಟಣ ಪಂಚಾಯಿತಿಯನ್ನಾಗಿ ಪರಿವರ್ತಿಸುವ ಕುರಿತು ಪ್ರಸ್ತಾವನೆ ಸ್ವೀಕೃತವಾಗಿಲ್ಲವಾದ್ದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

**ಸಂಖ್ಯೆ: ನಅಇ 03 ಎಲ್ಎಕ್ಯೂ 2021**

(ಎನ್. ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 18 ಐಎಪಿ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021.

69
U/S
29/1/2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ನಿಸರ್ಗ ನಾರಾಯಣಸ್ವಾಮಿ (ದೇವನಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 163ಕ್ಕೆ ಉತ್ತರಿಸುವ ಬಗ್ಗೆ.

---*---

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ನಿಸರ್ಗ ನಾರಾಯಣಸ್ವಾಮಿ (ದೇವನಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 163ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಎನ್. ಕುಮಾರ್

(ಎನ್. ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

28/01/2021

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 163
2. ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್.(ದೇವನಹಳ್ಳಿ)
3. ಉತ್ತರಿಸುವ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಳೆದ 03 ವರ್ಷಗಳಲ್ಲಿ ಕೆ.ಐ.ಎ.ಡಿ.ಬಿ. ವತಿಯಿಂದ ಕೈಗಾರಿಕಾ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡಿರುವ ಹಾಗೂ ಹೊಸದಾಗಿ ಅಧಿಸೂಚನೆ ಹೊರಡಿಸಿರುವ (ಸ್ವಾಧೀನಕ್ಕೆ) ಒಟ್ಟು ಭೂಮಿ ಎಷ್ಟು; (ತಾಲ್ಲೂಕುವಾರು ಮಾಹಿತಿ ನೀಡುವುದು) | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಕಳೆದ 03 ವರ್ಷಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಕೈಗಾರಿಕೆ ಉದ್ದೇಶಕ್ಕಾಗಿ ಸ್ವಾಧೀನಪಡಿಸಿಕೊಂಡಿರುವ ಮತ್ತು ಹೊಸದಾಗಿ ಭೂಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆ ಹೊರಡಿಸಿರುವ ತಾಲ್ಲೂಕುವಾರು ವಿಸ್ತೀರ್ಣದ ವಿವರ ಈ ಕೆಳಕಂಡಂತಿದೆ :- |

| ತಾಲ್ಲೂಕು | ಸ್ವಾಧೀನಪಡಿಸಿರುವ ವಿಸ್ತೀರ್ಣ(ಎ-ಗು) | ಹೊಸದಾಗಿ ಅಧಿಸೂಚನೆ ಹೊರಡಿಸಿರುವ ವಿಸ್ತೀರ್ಣ(ಎ-ಗು) |
|---|---|---|
| ನೆಲಮಂಗಲ | 888-16 | ಇಲ್ಲ |
| ದೇವನಹಳ್ಳಿ | 1202-05 | ಇಲ್ಲ |
| ಒಟ್ಟು | 2090-21 | |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | ಸ್ವಾಧೀನ ಪಡಿಸಿಕೊಂಡ ಜಮೀನುಗಳ ರೈತರಿಗೆ ಭೂ ಪರಿಹಾರದ ಧನ ಸಂಪೂರ್ಣವಾಗಿ ಪಾವತಿಸಲಾಗಿದೆಯೇ; | ಒಟ್ಟು 2090-21 ಎಕರೆ ಜಮೀನಿನ ಪೈಕಿ 1022-19 ಎಕರೆ ಜಮೀನಿನ ಭೂಮಾಲೀಕರುಗಳಿಗೆ ಪರಿಹಾರ ಪಾವತಿಸಲಾಗಿದೆ.<br>ಉಳಿಕೆ ಜಮೀನಿನ ಪರಿಹಾರ ಪಾವತಿ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| (ಇ) | ಇಲ್ಲದಿದ್ದಲ್ಲಿ, ಭೂ ಪರಿಹಾರ ಧನ ಪಾವತಿಗೆ ಬಾಕಿ ಇರುವ ಪ್ರಕರಣಗಳೆಷ್ಟು; (ತಾಲ್ಲೂಕುವಾರು ಫಲಾನುಭವಿವಾರು ಮಾಹಿತಿ ನೀಡುವುದು) | ಭೂಪರಿಹಾರ ಪಾವತಿ ಪ್ರಕ್ರಿಯೆ ಪ್ರಗತಿಯಲ್ಲಿರುವ ತಾಲ್ಲೂಕುವಾರು ಜಮೀನಿನ ವಿವರ ಈ ಕೆಳಕಂಡಂತಿದೆ :- |

| ತಾಲ್ಲೂಕು | ವಿಸ್ತೀರ್ಣ (ಎ-ಗು) |
|---|---|
| ನೆಲಮಂಗಲ | 345-26 |
| ದೇವನಹಳ್ಳಿ | 722-16 |
| ಒಟ್ಟು | 1068-02 |

| | | |
|---|---|---|
| (ಈ) | ಸ್ವಾಧೀನ ಪಡಿಸಿಕೊಂಡ ಜಮೀನುಗಳಲ್ಲಿ ಮತ್ತೆ ರೈತರಿಗೆ ಜಮೀನನ್ನು ಹಿಂದಿರುಗಿಸಿದ ಪ್ರಕರಣಗಳೆಷ್ಟು; ಹಿಂದಿರುಗಿಸಬೇಕಾದರೆ ಇರುವ ಮಾನದಂಡ ಹಾಗೂ ಷರತ್ತುಗಳೇನು; (ತಾಲ್ಲೂಕುವಾರು ಪೂರ್ಣ ಮಾಹಿತಿ ನೀಡುವುದು) | ಸ್ವಾಧೀನಪಡಿಸಿಕೊಂಡಿರುವ ಜಮೀನನ್ನು ಯಾವುದೇ ರೈತರಿಗೆ ಹಿಂದಿರುಗಿಸಿರುವುದಿಲ್ಲ. ಆದರೆ ಭೂಮಾಲೀಕರು ಜಮೀನಿನ ಪರಿಹಾರದ ಬದಲಾಗಿ ಪ್ರತಿ ಎಕರೆಗೆ 9583 ಚ.ಮೀ. ಅಭಿವೃದ್ಧಿಪಡಿಸಿದ ಜಮೀನನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. |
| (ಉ) | ಪ್ರಸ್ತುತ ಹೊಸದಾಗಿ ಭೂ ಸ್ವಾಧೀನಕ್ಕೆ ಅಧಿಸೂಚನೆ ಹೊರಡಿಸಿರುವ ಪ್ರಕರಣಗಳೆಷ್ಟು; ಎಷ್ಟು ಭೂಮಿ ಸ್ವಾಧೀನಕ್ಕೆ ಅಧಿಸೂಚನೆ ಹೊರಡಿಸಲಾಗಿದೆ; ಭೂ ಸ್ವಾಧೀನ ಪಡಿಸಿಕೊಳ್ಳುವ ಗ್ರಾಮಠಾಣದಿಂದ ಎಷ್ಟು ವ್ಯಾಪ್ತಿ ಬಿಟ್ಟು ಸ್ವಾಧೀನ ಪಡಿಸಿಕೊಳ್ಳಲು ಅವಕಾಶವಿದೆ; ಇದರ ನಿಯಮ ಮತ್ತು ಷರತ್ತುಗಳೇನು? (ತಾಲ್ಲೂಕುವಾರು ಪೂರ್ಣ ಮಾಹಿತಿ ನೀಡುವುದು) | ಪ್ರಸ್ತುತ ನೆಲಮಂಗಲ ತಾಲ್ಲೂಕು ವ್ಯಾಪ್ತಿಯಲ್ಲಿ ಹೊಸದಾಗಿ ಭೂಸ್ವಾಧೀನಪಡಿಸಿಕೊಳ್ಳಲು ಪ್ರಾಥಮಿಕ ಅಧಿಸೂಚನೆ ಹೊರಡಿಸಿರುವ ಪ್ರಕರಣಗಳ ವಿವರ ಈ ಕೆಳಕಂಡಂತಿದೆ :- |

| ಕ್ರ.ಸಂ. | ಕೈಗಾರಿಕಾ ಪ್ರದೇಶದ ಹೆಸರು | ಸ್ವಾಧೀನಪಡಿಸುತ್ತಿರುವ ಒಟ್ಟು ವಿಸ್ತೀರ್ಣ (ಎ-ಗು) |
|---|---|---|
| 1. | ಓಬಳಾಪುರ | 858-17 |
| 2. | ದಾಬಸ್ ಪೇಟೆ | 273-02 |
| | ಒಟ್ಟು | 1131-19 |

ದಿನಾಂಕ: 18.03.2013ರ ಸುತ್ತೋಲೆಯಲ್ಲಿ ತಿಳಿಸಿರುವಂತೆ ಗ್ರಾಮಠಾಣದ ಸರಹದ್ದಿನಿಂದ 100 ಮೀಟರ್ ವ್ಯಾಪ್ತಿಯ ಜಮೀನುಗಳನ್ನು ಹೊರತುಪಡಿಸಲು ಅವಕಾಶವಿದೆ.

ಸಂಖ್ಯೆ: ಸಿಐ 18 ಐಎಪಿ (ಇ) 2021

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ ಸಿಐ 22 ಎಂಎಂಎನ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
1ನೇ ಮಹಡಿ, ವಿಕಾಸಸೌಧ,
ಬೆಂಗಳೂರು, ದಿನಾಂಕ 28.01.2021

ಇಂದ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
(ಎಂ.ಎಸ್.ಎಂ.ಇ., ಜವಳಿ ಮತ್ತು ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನಸೌಧ

4/5 ~~10~~ 29/1/21

ಮಾನ್ಯರೇ,

ವಿಷಯ : ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 56ಕ್ಕೆ ಉತ್ತರ ಒದಗಿಸುವ ಕುರಿತು.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.56/2021, ದಿನಾಂಕ 21.01.2021.

-----

ಪ್ರಸ್ತಾಪಿತ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರದಲ್ಲಿ ಕೋರಿರುವಂತೆ ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಆನಂದ್ ಸಿದ್ದು ನ್ಯಾಮಗೌಡ (ಜಮಖಂಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 56ಕ್ಕೆ ಸರ್ಕಾರದ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ

(ಶಿವಪ್ರಕಾಶ)
ಪೀಠಾಧಿಕಾರಿ (ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪ್ರತಿ:-

1. ಮಾನ್ಯ ಗಣಿ ಮತ್ತು ಭೂವಿಜ್ಞಾನ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
3. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.
4. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 56 |
| ಸದಸ್ಯರ ಹೆಸರು | ಶ್ರೀ ಆನಂದ್ ಸಿದ್ದು ನ್ಯಾಮಗೌಡ |
| ಉತ್ತರಿಸಬೇಕಾದ ದಿನಾಂಕ | 29.01.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ) | ಬಾಗಲಕೋಟೆ ಜಿಲ್ಲೆ, ಜಮಖಂಡಿ ಮತಕ್ಷೇತ್ರದಲ್ಲಿ ವಸತಿ ಯೋಜನೆ ಅಡಿಯಲ್ಲಿ ಫಲಾನುಭವಿಗಳಿಗೆ ಮಂಜೂರಾದ ಮನೆಗಳನ್ನು ಕಟ್ಟಿಕೊಳ್ಳಲು ಕೃಷ್ಣಾ ನದಿಯಲ್ಲಿ ಮರಳಿನ ಪ್ರಮಾಣವಿದ್ದು, ಅದಕ್ಕೆ ಮರಳು ಟೆಂಡರ್ ಅನ್ನು ಯಾವಾಗ ಕರೆಯಲಾಗುವುದು; | ಸರ್ಕಾರವು ದಿನಾಂಕ 05.05.2020 ರಂದು ಹೊಸ ಮರಳು ನೀತಿ, 2020ನ್ನು ಜಾರಿಗೊಳಿಸಿರುತ್ತದೆ. ಸದರಿ ಮರಳು ನೀತಿಯಂತೆ ರಾಜ್ಯದಲ್ಲಿ ಮರಳು ಗಣಿಗಾರಿಕೆ ಮತ್ತು ವಿಲೇವಾರಿ ಜವಾಬ್ದಾರಿಯನ್ನು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಾದ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ (HGML) ಹಾಗೂ ಕರ್ನಾಟಕ ಸ್ಟೇಟ್ ಮಿನರಲ್ಸ್ ಕಾರ್ಪೋರೇಷನ್ ಲಿ., (KSMCL) ಇವರಿಗೆ ವಹಿಸಲಾಗಿದ್ದು, ಸಾರ್ವಜನಿಕ ಟೆಂಡರ್ ಕಂ-ಹರಾಜು ಮೂಲಕ ಮರಳು ವಿಲೇವಾರಿ ಮಾಡುವ ಪ್ರಕ್ರಿಯೆಯನ್ನು ರದ್ದುಪಡಿಸಲಾಗಿರುತ್ತದೆ.<br><br>ಪ್ರಸ್ತುತ ಕೃಷ್ಣ ನದಿಯು ತುಂಬಿ ಹರಿಯುತ್ತಿದ್ದು, ಈ ಹಿಂದೆ ಜಮಖಂಡಿ ತಾಲ್ಲೂಕು, ತಮದಡ್ಡಿ, ಮತ್ತೂರು ಕಡಕೋಳ ಮತ್ತು ಚಿಕ್ಕಪಡಸಲಗಿ ಗ್ರಾಮಗಳ ವ್ಯಾಪ್ತಿಯಲ್ಲಿ ಗುರುತಿಸಲಾಗಿದ್ದ 04 ಮರಳು ಬ್ಲಾಕ್ ಗಳು ಕೃಷ್ಣ ನದಿಯ ಆಲಮಟ್ಟಿ ಅಣೆಕಟ್ಟೆಯ ಹಿನ್ನೀರಿನ ಪ್ರದೇಶದಲ್ಲಿರುವುದರಿಂದ ವರ್ಷವಿಡಿ ಸದರಿ ಮರಳು ಬ್ಲಾಕ್‌ಗಳು ನೀರಿನಿಂದ ಆವೃತವಾಗಿರುವುದರಿಂದ, ಹೊಸ ಮರಳು ನೀತಿಯನ್ವಯ ಸದರಿ ಮರಳು ಬ್ಲಾಕ್‌ಗಳಲ್ಲಿನ ಮರಳನ್ನು ವಿಲೇಪಡಿಸಲು ಸಾಧ್ಯವಾಗಿರುವುದಿಲ್ಲ. |
| ಆ) | ಈವರೆಗೂ ಮರಳಿನ ಟೆಂಡರ್ ಕರೆಯದೇ ಇರಲು ಕಾರಣವೇನು? | |

ಸಂಖ್ಯೆ ಸಿಐ 22 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು




ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು – 560001.
ದೂ. 080–22034625 ಫ್ಯಾಕ್ಸ್: 080–22353932

ಸಂಖ್ಯೆ: ಸಿಐ 31 ಎಸ್‌ಪಿಐ 2021 ದಿನಾಂಕ 29.01.2021

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ,
ಬೆಂಗಳೂರು–01.

02
a/s
29/1/2021

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ಅಂಚೆ ಪೆಟ್ಟಿಗೆ ಸಂಖ್ಯೆ: 5074,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 66ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.66/2021, ದಿನಾಂಕ 21.01.2021.

*****

ದಿನಾಂಕ 29.01.2021 ರಂದು ಉತ್ತರಿಸಬೇಕಾದ ಮೇಲ್ಕಾಣಿಸಿದ ವಿಧಾನಸಭೆಯ ಪ್ರಶ್ನೆಗೆ ಉತ್ತರಗಳ 50 ಪ್ರತಿಗಳನ್ನು ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

G. Nagarathnamma. 29/1/2021
(ನಾಗರತ್ನಮ್ಮ .ಜಿ)
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 66

ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೊಪ್ಪಳ ಜಿಲ್ಲೆಯಲ್ಲಿ ಕರ್ಯನಿರ್ವಹಿಸುತ್ತಿರುವ ಒಟ್ಟು ಬೃಹತ್ ಹಾಗೂ ಮಧ್ಯಮ ಕೈಗಾರಿಕೆಗಳ ಸಂಖ್ಯೆ ಎಷ್ಟು (ವಿವರ ನೀಡುವುದು); | ಕೊಪ್ಪಳ ಜಿಲ್ಲೆಯಲ್ಲಿ ಒಟ್ಟು 28 ಬೃಹತ್ ಹಾಗೂ ಮಧ್ಯಮ ಕೈಗಾರಿಕೆಗಳು ಕಾರ್ಯನಿರ್ವಹಿಸುತ್ತಿವೆ.<br><br>ವಿವರಗಳನ್ನು **ಅನುಬಂಧ-1** ರಲ್ಲಿ ಒದಗಿಸಲಾಗಿದೆ. |
| ಆ | ಸದರಿ ಕೈಗಾರಿಕೆಗಳಲ್ಲಿ ಕೊಪ್ಪಳ ಜಿಲ್ಲೆಯವರಿಗೆ ನೀಡಲಾದ ಅವಕಾಶಗಳೆಷ್ಟು; | ಸದರಿ ಕೈಗಾರಿಕೆಗಳಲ್ಲಿ ಡಾ: ಸರೋಜಿನಿ ಮಹಿಷಿ ವರದಿಯ ವ್ಯಾಪ್ತಿಗೆ ಬರುವ ಕೈಗಾರಿಕೆಗಳಲ್ಲಿನ ಒಟ್ಟು 3749 ಉದ್ಯೋಗಿಗಳಲ್ಲಿ 3415 ಕನ್ನಡಿಗರಿಗೆ ಉದ್ಯೋಗಾವಕಾಶವನ್ನು ಕಲ್ಪಿಸಲಾಗಿದೆ. |
| ಇ | ಕಾರ್ಖಾನೆವಾರು ಯಾವ ಯಾವ ಹುದ್ದೆಗಳಿವೆ; ಇವುಗಳಲ್ಲಿ ಕೊಪ್ಪಳ ಜಿಲ್ಲೆಯವರು ಯಾವ ಯಾವ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ (ವಿವರ ನೀಡುವುದು); | ಡಾ: ಸರೋಜಿನಿ ಮಹಿಷಿ ವರದಿಯ ವ್ಯಾಪ್ತಿಗೆ ಬರುವ ಕೈಗಾರಿಕೆಗಳಲ್ಲಿ ಎ, ಬಿ, ಸಿ, ಡಿ ಎಂಬ 4 ವಿವಿಧ ಹುದ್ದೆಗಳು ಇರುತ್ತವೆ. ಸದರಿ ಕೈಗಾರಿಕೆಗಳಲ್ಲಿನ ವರ್ಗವಾರು ಹುದ್ದೆಗಳಲ್ಲಿ ಕನ್ನಡಿಗರಿಗೆ ಒದಗಿಸಿರುವ ಉದ್ಯೋಗಾವಕಾಶದ ವಿವರಗಳು ಈ ಕೆಳಗಿನಂತಿದೆ.<br><br>ಕ್ರ.ಸಂ. / ವರ್ಗ / ಸಂಖ್ಯೆ<br>1 / ಎ / 171<br>2 / ಬಿ / 1067<br>3 / ಸಿ / 824<br>4 / ಡಿ / 1353<br>ಒಟ್ಟು / **3415**<br><br>ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಲಾಗಿದೆ. |
| ಈ | ಸದರಿ ಕಾರ್ಖಾನೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವಾಗ ವಿಧಿಸಿದ ಷರತ್ತುಗಳೇನು; ಅವುಗಳನ್ನು ಕಾರ್ಖಾನೆಗಳ ಆಡಳಿತ | ಸದರಿ ಕಾರ್ಖಾನೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವಾಗ ಸರ್ಕಾರದಿಂದ ಈ ಕೆಳಕಂಡ ಸಾಮಾನ್ಯ ಷರತ್ತುಗಳನ್ನು ವಿಧಿಸಲಾಗಿರುತ್ತದೆ. |

| | | |
|---|---|---|
| | ಮಂಡಳಿ ಪಾಲಿಸುತ್ತಿವೆಯೇ (ವಿವರ ನೀಡುವುದು); | 1) ಸ್ಥಳೀಯರಿಗೆ ಉದ್ಯೋಗ ನೀಡುವುದು.<br>2) ಘಟಕದಿಂದ ಯಾವುದೇ ತರಹದ ವಾಯು ಮಾಲಿನ್ಯ ಮತ್ತು ಶಬ್ದ ಮಾಲಿನ್ಯ ಆಗದಂತೆ ನೋಡಿಕೊಳ್ಳುವುದು.<br>3) ಸರ್ಕಾರಕ್ಕೆ ಸಕಾಲದಲ್ಲಿ ತೆರಿಗೆಯನ್ನು ಪಾವತಿಸುವುದು, ಇತ್ಯಾದಿ.<br><br>ಘಟಕದ ಮಾಲೀಕರು ಈ ಮೇಲಿನ ಷರತ್ತುಗಳನ್ನು ಪಾಲನೆ ಮಾಡುತ್ತಿದ್ದಾರೆ. |
| ಉ | ಇಲ್ಲದಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು? | ಅನ್ವಯಿಸುವುದಿಲ್ಲ. |

ಸಿಐ 31 ಎಸ್‌ಪಿಐ 2021

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು




ಸಂಖ್ಯೆ: ಸಿಒ 13 ಸಿಎಲ್ಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

u/s 46
29/01/2021

ಇವರಿಂದ,
**ಸರ್ಕಾರದ ಪ್ರಧಾನ ಕಾರ್ಯದರ್ಶಿ,**
ಸಹಕಾರ ಇಲಾಖೆ,
ಬೆಂಗಳೂರು – 560 001.

ಇವರಿಗೆ,
**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 93 ಕ್ಕೆ ಉತ್ತರ ನೀಡುವ ಬಗ್ಗೆ.

******

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 93 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,
Radha HC
(ಹೆಚ್.ಸಿ. ರಾಧ)
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಸಹಕಾರ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಮಾನ್ಯ ವಿಧಾನ ಸಭೆ ಸದಸ್ಯರು : ಶ್ರೀ ಕುಮಾರಸ್ವಾಮಿ ಹೆಚ್.ಕೆ.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 93

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಬ್ಯಾಂಕುಗಳ ಮೂಲಕ ಸ್ವಸಹಾಯ ಸಂಘಗಳಿಗೆ ಶೇ. 3 ರ ಬಡ್ಡಿ 'ಕಾಯಕ' ಯೋಜನೆಯನ್ನು ರೂಪಿಸಲಾಗಿದ್ದು, ಈ ಯೋಜನೆಯಲ್ಲಿ ಜಿಲ್ಲಾವಾರು ಎಷ್ಟು ಸ್ವಸಹಾಯ ಸಂಘಗಳಿಗೆ ಕಾಯಕ ಯೋಜನೆಯ ಫಲಾನುಭವಿಗಳಾಗಿ ಆಯ್ಕೆ ಮಾಡಲಾಗಿದೆ; ಹಾಗೂ 2020-21 ನೇ ಸಾಲಿನ ಆಯ-ವ್ಯಯದಲ್ಲಿ ಎಷ್ಟು ಹಣವನ್ನು ಸದರಿ ಯೋಜನೆಗೆ ಮೀಸಲಿಡಲಾಗಿದೆ; ಬ್ಯಾಂಕುಗಳಿಂದ ಈ ಯೋಜನೆಯಡಿ ಈ ದಿನಾಂಕದವರೆಗೆ ಎಷ್ಟು ಸಾಲ ನೀಡಲಾಗಿದೆ; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಸಿಒ 146 ಸಿಎಲ್‌ಎಸ್ 2018, ಬೆಂಗಳೂರು, ದಿನಾಂಕ: 20.09.2018 ರ ಆದೇಶದಂತೆ 2018-19 ನೇ ಸಾಲಿಗೆ ಸಹಕಾರ ಸಂಸ್ಥೆಗಳಿಂದ ರಚಿಸಲ್ಪಡುವ ಸ್ವ-ಸಹಾಯ ಗುಂಪುಗಳ ಸದಸ್ಯರ ಕೌಶಲ್ಯಾಭಿವೃದ್ಧಿ ಮತ್ತು ಉದ್ಯಮಶೀಲತೆಯನ್ನು ವೃದ್ಧಿಗೊಳಿಸುವುದರ ಮೂಲಕ ಸ್ವ-ಉದ್ಯೋಗವನ್ನು ಪ್ರೋತ್ಸಾಹಿಸಿ, ಆದಾಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಡಿ.ಸಿ.ಸಿ. ಬ್ಯಾಂಕುಗಳು ಮತ್ತು ಪಟ್ಟಣ ಬ್ಯಾಂಕುಗಳ ಮೂಲಕ ಗರಿಷ್ಠ ರೂ. 10.00 ಲಕ್ಷದವರೆಗೆ ಸಾಲವನ್ನು ನಿಗಧಿಪಡಿಸಿ, ರೂ. 5.00 ಲಕ್ಷದವರೆಗಿನ ಸಾಲಕ್ಕೆ ಶೂನ್ಯ ಬಡ್ಡಿ ಮತ್ತು ರೂ. 5.00 ರಿಂದ ರೂ. 10.00 ಲಕ್ಷದವರೆಗಿನ ಸಾಲಕ್ಕೆ ಶೇ. 4 ರ ಬಡ್ಡಿದರ ಅನ್ವಯವಾಗುವಂತೆ ಕಾಯಕ ಯೋಜನೆಯನ್ನು ಜಾರಿಗೆ ತರಲಾಗಿರುತ್ತದೆ.<br><br>2020-21ನೇ ಸಾಲಿಗೂ ಈ ಯೋಜನೆ ಮುಂದುವರೆಸಲಾಗಿದ್ದು, ರಾಜ್ಯದಲ್ಲಿರುವ ಡಿ.ಸಿ.ಸಿ ಬ್ಯಾಂಕುಗಳಿಂದ ಒಟ್ಟು 540 ಸ್ವ-ಸಹಾಯ ಸಂಘಗಳನ್ನು ಫಲಾನುಭವಿಗಳಾಗಿ ಆಯ್ಕೆ ಮಾಡಿ, ಈ ಪೈಕಿ 245 ಸ್ವ-ಸಹಾಯ ಸಂಘಗಳಿಗೆ ರೂ.1081.21 ಲಕ್ಷಗಳ ಮೊತ್ತದ ಸಾಲವನ್ನು ವಿತರಿಸಲಾಗಿರುತ್ತದೆ. ಜಿಲ್ಲಾವಾರು ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ.<br><br>2020-21 ನೇ ಸಾಲಿನಲ್ಲಿ ಈ ಯೋಜನೆಗೆ ರೂ.90.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ. |
| ಆ) | ಕಾಯಕ ಯೋಜನೆಯಲ್ಲಿ ಎಷ್ಟು ಹಣವನ್ನು ಸಹಕಾರಿ ಬ್ಯಾಂಕುಗಳಿಗೆ ಬಿಡುಗಡೆ ಮಾಡಲಾಗಿದೆ; ಬಿಡುಗಡೆ ಮಾಡಲು ಬಾಕಿ ಇರುವ ಮೊತ್ತವೆಷ್ಟು; ಸದರಿ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಸಾಲ ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕುಗಳು ಕಾಯಕ ಯೋಜನೆಯಲ್ಲಿ ಸ್ವ-ಸಹಾಯ ಸಂಘಗಳಿಗೆ ವಿತರಿಸಲಾಗಿದ್ದ ಸಾಲಕ್ಕೆ ರೂ.46.91 ಲಕ್ಷಗಳ ಬಡ್ಡಿ ಸಹಾಯಧನ ಬಿಡುಗಡೆ ಮಾಡಲಾಗಿದ್ದು, ರೂ.18.90 ಲಕ್ಷಗಳ ಬಡ್ಡಿ ಸಹಾಯಧನ ಬಿಡುಗಡೆಗೆ ಕ್ರಮವಿಡಲಾಗಿದೆ. ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ.<br>ಸದರಿ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ಅರ್ಹ ಸ್ವ-ಸಹಾಯ ಸಂಘಗಳ ಮೂಲಕ ಸಾಲ ನೀಡಲು ಯಾವುದೇ ತೊಂದರೆ ಇರುವುದಿಲ್ಲ. |

ಸಂಖ್ಯೆ: ಸಿಒ 13 ಸಿಎಲ್‌ಎಸ್ 2021

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು



ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು – 560001.
ದೂ. 080–22034625 ಫ್ಯಾಕ್ಸ್: 080–22353932

ಸಂಖ್ಯೆ: ಸಿಐ 32 ಎಸ್‌ಪಿಐ 2021 ದಿನಾಂಕ 29.01.2021

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ,
ಬೆಂಗಳೂರು–01.

OS
U/S
29/1/2021

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ಅಂಚೆ ಪೆಟ್ಟಿಗೆ ಸಂಖ್ಯೆ: 5074,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ಅಜಯ್ ಧರ್ಮ ಸಿಂಗ್ ಡಾ|| (ಜೇವರ್ಗಿ)ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 101ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.101/2021, ದಿನಾಂಕ 21.01.2021.

*****

ದಿನಾಂಕ 29.01.2021 ರಂದು ಉತ್ತರಿಸಬೇಕಾದ ಮೇಲ್ಕಾಣಿಸಿದ ವಿಧಾನಸಭೆಯ ಪ್ರಶ್ನೆಗೆ ಉತ್ತರಗಳ 50 ಪ್ರತಿಗಳನ್ನು ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

G. Nagarathnamma
29/1/2021
(ನಾಗರತ್ನಮ್ಮ .ಜಿ)
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 101

ಸದಸ್ಯರ ಹೆಸರು : ಶ್ರೀ ಅಜಯ್ ಧರ್ಮ ಸಿಂಗ್ ಡಾ|| (ಜೇವರ್ಗಿ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಜಿಲ್ಲೆಯನ್ನು ವಿಶೇಷ ಹೂಡಿಕೆ ವಲಯವನ್ನಾಗಿ ಹೊಸ ಕೈಗಾರಿಕೆ ನೀತಿಯಲ್ಲಿ ಘೋಷಿಸಲಾಗಿದೆಯೇ; | ಹೌದು,<br>ಕಲಬುರಗಿ ಜಿಲ್ಲೆಯನ್ನೊಳಗೊಂಡಂತೆ ಕಲ್ಯಾಣ ಕರ್ನಾಟಕ ಜಿಲ್ಲೆಗಳಲ್ಲಿ ವಿಶೇಷ ಹೂಡಿಕೆ ವಲಯ ಸ್ಥಾಪಿಸಲು ನೂತನ ಕೈಗಾರಿಕೆ ನೀತಿ 2020-25ರಲ್ಲಿ ಅವಕಾಶ ಕಲ್ಪಿಸಲಾಗಿದೆ ಮತ್ತು ಈ ನೀತಿಯಡಿ ಕಲ್ಯಾಣ ಕರ್ನಾಟಕದ ಎಲ್ಲಾ ತಾಲ್ಲೂಕುಗಳನ್ನು ವಲಯ-1 (ಅತ್ಯಂತ ಹಿಂದುಳಿದ ತಾಲ್ಲೂಕು) ಎಂದು ವರ್ಗೀಕರಿಸಲಾಗಿದೆ, ಇದರಿಂದ ಎಲ್ಲಾ ತಾಲ್ಲೂಕುಗಳಲ್ಲಿ ಸ್ಥಾಪನೆಯಾಗುವ ಕೈಗಾರಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹ ಮತ್ತು ರಿಯಾಯಿತಿಗಳು ದೊರೆಯಲಿವೆ. |
| ಆ | ಈ ಹಿಂದಿನ ಆಯವ್ಯಯದಲ್ಲಿ ಘೋಷಣೆ ಮಾಡಿರುವ ಯೋಜನೆಗಳನ್ನು ಪೂರ್ಣವಾಗಿ ಅನುಷ್ಠಾನಕ್ಕೆ ತರಲಾಗಿದೆಯೇ; | ನೂತನ ಕೈಗಾರಿಕಾ ನೀತಿ 2020-21ನ್ನು ದಿನಾಂಕ 13.08.2020 ರಂದು ಜಾರಿಗೊಳಿಸಿರುವುದರಿಂದ ಕ್ರಮ ವಹಿಸಲಾಗುತ್ತಿದೆ. |
| ಇ | ಇಲ್ಲದಿದ್ದಲ್ಲಿ, ಅವುಗಳು ಯಾವ ಹಂತದಲ್ಲಿವೆ? (ವಿವರ ನೀಡುವುದು) | |

ಸಿಐ 32 ಎಸ್‌ಪಿಐ 2021

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 02 ಎಲ್ಎಕ್ಯೂ 2021.

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29/01/2021.

U/S
38
29/01/2021

ಇವರಿಂದ
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಇವರಿಗೆ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಪ್ರಶ್ನೆ ಸಂಖ್ಯೆ 40 ಕ್ಕೆ ಉತ್ತರಿಸುವ ಬಗ್ಗೆ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 40 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಹಾಗೂ Soft Copy ಯನ್ನು email ID: questionskla@karnataka.gov.in ಇಲ್ಲಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

A. Vijayakumar
28.01.2021

(ಎ ವಿಜಯ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಎಂಎ-1&3)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 40
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸುವ ದಿನಾಂಕ : 29/01/2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ಜಿಲ್ಲೆಯ ಬೈಲಹೊಂಗಲ ಪಟ್ಟಣವು ಸುಮಾರು 50,000 ಸಾವಿರ ಜನಸಂಖ್ಯೆಯನ್ನು ಹೊಂದಿದ್ದು, ಈ ಪಟ್ಟಣದಲ್ಲಿ ಉಪ ವಿಭಾಗಾಧಿಕಾರಿಗಳು ಡಿ.ವೈ.ಎಸ್.ಪಿ. ಆರ್.ಟಿ.ಓ ಹಾಗೂ ಇನ್ನಿತರೆ ಪ್ರಮುಖ ಕಛೇರಿಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೈಲಹೊಂಗಲ ಪುರಸಭೆಯ ಜನಸಂಖ್ಯೆಯು 2011 ರ ಜನಗಣತಿಯನುಸಾರ 49,182 ಇರುತ್ತದೆ.<br><br>ಬೈಲಹೊಂಗಲ ಪುರಸಭಾ ವ್ಯಾಪ್ತಿಯಲ್ಲಿ ಉಪವಿಭಾಗಾಧಿಕಾರಿಗಳ ಕಛೇರಿ, ಆರ್.ಟಿ.ಓ ಕಛೇರಿ, ಡಿ.ವೈ.ಎಸ್.ಪಿ ಕಛೇರಿ ಹಾಗೂ ಇನ್ನಿತರೆ ಪ್ರಮುಖ ಕಛೇರಿಗಳು ಕಾರ್ಯನಿರ್ವಹಿಸುತ್ತಿವೆ. |
| ಆ | ಬಂದಿದ್ದಲ್ಲಿ, ಬೈಲಹೊಂಗಲ ಪುರಸಭೆಯನ್ನು ಜನಸಂಖ್ಯೆಗನುಗುಣವಾಗಿ ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಬೈಲಹೊಂಗಲ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಇ | ಇದ್ದಲ್ಲಿ, ಸಾರ್ವಜನಿಕರ ಹಿತದೃಷ್ಟಿಯಿಂದ ಬೈಲಹೊಂಗಲ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ? | ಉದ್ಭವಿಸುವುದಿಲ್ಲ. |

ಸಂಖ್ಯೆ:ನಅಇ 02 ಎಲ್‌ಎಕ್ಯೂ 2021.

(ಎನ್.ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 31 ಎಂಆರ್‌ಇ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

106
UTS
29/1/2021

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:221ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.221/2021, ದಿನಾಂಕ:21.01.2021.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಶ್ರೀನಿವಾಸ ಎಂ. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:221ಕ್ಕೆ ದಿನಾಂಕ:29.01.2021ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಉತ್ತರವನ್ನು ಪಿ.ಡಿ.ಎಫ್ ಮಾದರಿಯಲ್ಲಿ ಇ-ಮೇಲ್ ಸಂಖ್ಯೆ: dsqb-kla-kar@nic.in ರ ಮೂಲಕ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್.ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 221
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ.
3. ಉತ್ತರಿಸಬೇಕಾದ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

***

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಪ್ರದೇಶದ ರೈತ ಸಂತೆಗಳಿಗೆ ಸರ್ಕಾರದಿಂದ ಸಿಗುತ್ತಿರುವ ಸವಲತ್ತುಗಳೇನು? (ಸಂಪೂರ್ಣ ಮಾಹಿತಿ ನೀಡುವುದು); | ಆಯ್ದ ಸಂತೆ ನಡೆಯುವ ಗ್ರಾಮೀಣ ಪ್ರದೇಶದ ಗ್ರಾಮೀಣ ಸಂತೆಗಳಿಗೆ ಸರ್ಕಾರದಿಂದ ಮುಚ್ಚಿದ ಹರಾಜುಕಟ್ಟೆಗಳು, ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯ, ರಸ್ತೆ ಮತ್ತು ಚರಂಡಿ, ವಿದ್ಯುಚ್ಛಕ್ತಿ ವ್ಯವಸ್ಥೆಯನ್ನು ನಬಾರ್ಡ್ ಸಂಸ್ಥೆಯ ಆರ್.ಐ.ಡಿ.ಎಫ್ ಯೋಜನೆಯಡಿ ಕಲ್ಪಿಸಲಾಗಿರುತ್ತದೆ. |
| ಆ | ಮಂಡ್ಯದ ವಿಧಾನಸಭಾ ಕ್ಷೇತ್ರದ ಕಸಬಾ ಹೋಬಳಿ ಕೇಂದ್ರವಾದ ಹನಕೆರೆ ಗ್ರಾಮದಲ್ಲಿ ಈಗಾಗಲೇ ರೈತ ಸಂತೆಗೆ 2 ಎಕರೆ ಜಾಗ ನೀಡಿದ್ದು, ಯಾವುದೇ ಅಭಿವೃದ್ಧಿ ಕಾಣದಿರಲು ಕಾರಣವೇನು; | ಹನಕೆರೆ ಗ್ರಾಮದ ಗ್ರಾಮೀಣ ಸಂತೆಗೆ 2006–07ನೇ ಸಾಲಿನಲ್ಲಿ ನಬಾರ್ಡ್ ಸಂಸ್ಥೆಯ ಆರ್.ಐ.ಡಿ.ಎಫ್ ಯೋಜನೆಯಡಿ ರೂ.10.00 ಲಕ್ಷಗಳ ಮೊತ್ತದಲ್ಲಿ ಮುಚ್ಚಿದ ಹರಾಜುಕಟ್ಟೆ ನಿರ್ಮಾಣ ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಕಲ್ಪಿಸಲಾಗಿರುತ್ತದೆ. |
| ಇ | ಹನಕೆರೆ ಗ್ರಾಮದಲ್ಲಿ ರೈತ ಸಂತೆಯ ಅಭಿವೃದ್ಧಿ ಕಾಮಗಾರಿ ಯಾವಾಗ ಪ್ರಾರಂಭ ಮಾಡಲಾಗುವುದು (ವಿವರ ನೀಡುವುದು) ? | |

**ಸಂಖ್ಯೆ:ಸಿಒ 31 ಎಂಆರ್‌ಇ 2021**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 01 ಎಲ್ಎಕ್ಯೂ 2021.

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:29/01/2021.

U/S 41 29/01/21

ಇವರಿಂದ
ಸರ್ಕಾರದ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

ಇವರಿಗೆ
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನ ಸೌಧ, ಬೆಂಗಳೂರು

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಪ್ರಶ್ನೆ ಸಂಖ್ಯೆ 44 ಕ್ಕೆ ಉತ್ತರಿಸುವ ಬಗ್ಗೆ.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 44 ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಹಾಗೂ Soft Copy ಯನ್ನು email ID: questionskla@karnataka.gov.in ಇಲ್ಲಿಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

AVijayakumar 28.01.2021

(ಎ ವಿಜಯ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಎಂಎ–1&3)

29/01.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 44
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸುವ ದಿನಾಂಕ : 29/01/2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ಜಿಲ್ಲೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸವದತ್ತಿ ತಾಲ್ಲೂಕಿನ ಇಂಚಲ ಗ್ರಾಮ ಪಂಚಾಯಿತಿಯು ಅತೀ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2011 ರ ಜನಗಣತಿಯನುಸಾರ ಇಂಚಲ ಗ್ರಾಮ ಪಂಚಾಯಿತಿಯ ಜನಸಂಖ್ಯೆಯು 6,563 ಇರುತ್ತದೆ. |
| ಆ | ಬಂದಿದ್ದಲ್ಲಿ, ಸಾರ್ವಜನಿಕರು ಹಾಗೂ ಆಡಳಿತ ಹಿತದೃಷ್ಟಿಯಿಂದ ಈ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಇಂಚಲ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಸರ್ಕಾರದ ಮುಂದೆ ಪ್ರಸ್ತಾವನೆ ಇರುವುದಿಲ್ಲ.<br><br>ಕರ್ನಾಟಕ ಪುರಸಭೆಗಳ ಅಧಿನಿಯಮ 1964 ರ ಕಲಂ 349 ರನ್ವಯ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕನಿಷ್ಠ ಜನಸಂಖ್ಯೆ 10,000 ಇರಬೇಕು. ಮುಂದುವರೆದು, ದಿ:19.03.2015 ರಂದು ನಡೆದ ಸಚಿವ ಸಂಪುಟ ಸಭೆಯ ತೀರ್ಮಾನದನ್ವಯ 15,000 ಕ್ಕೂ ಹೆಚ್ಚಿನ ಜನಸಂಖ್ಯೆ ಹೊಂದಿರುವ ಪ್ರಕರಣಗಳನ್ನು ಮಾತ್ರ ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಕ್ರಮವಹಿಸಲಾಗಿರುತ್ತದೆ.<br><br>ಇಂಚಲ ಗ್ರಾಮ ಪಂಚಾಯಿತಿಯ ಜನಸಂಖ್ಯೆಯು 6,563 ಇರುವುದರಿಂದ ಪಟ್ಟಣ ಪಂಚಾಯಿತಿಯನ್ನಾಗಿ ಪರಿವರ್ತಿಸಲು ಅರ್ಹತೆ ಇರುವುದಿಲ್ಲ. |
| ಇ | ಇದ್ದಲ್ಲಿ, ಈ ಗ್ರಾಮ ಪಂಚಾಯಿತಿಯನ್ನು ಪಟ್ಟಣ ಪಂಚಾಯಿತಿಯನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | |

ಸಂಖ್ಯೆ:ನಅಇ 01 ಎಲ್‌ಎಕ್ಯೂ 2021.

(ಸಹಿ)
(ಎನ್.ನಾಗರಾಜು ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

ಕರ್ನಾಟಕಸರ್ಕಾರ

ಸಂಖ್ಯೆ: HORTI 30 HGM 2021

ಕರ್ನಾಟಕಸರ್ಕಾರದಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 28-01-2021

67 u/s
29/01/2021

ಇವರಿಂದ:
ಪ್ರಧಾನ ಸರ್ಕಾರದ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ಕೆ.ವೈ.ನಂಜೇಗೌಡ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:145ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಕೆ.ವೈ.ನಂಜೇಗೌಡ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:145ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮನಂಬುಗೆಯ

T.V. Sunandamma 28/01/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

28/1

<u>ಕರ್ನಾಟಕ ವಿಧಾನ ಸಭೆ</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ : 145

ಸದಸ್ಯರ ಹೆಸರು : ಶ್ರೀ ನಂಜೇಗೌಡ ಕೆ.ವೈ.

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಾಲೂರು ವಿಧಾನಸಭಾ ಕ್ಷೇತ್ರಕ್ಕೆ ತೋಟಗಾರಿಕೆ ಇಲಾಖೆಯಿಂದ ಕಳೆದ ಮೂರು ವರ್ಷಗಳಿಂದ ಬಿಡುಗಡೆಯಾದ ಅನುದಾನವೆಷ್ಟು (ಯೋಜನೆವಾರು ಮಾಹಿತಿ ನೀಡುವುದು); | ಅನುಬಂಧ -1 ರಲ್ಲಿ ಒದಗಿಸಲಾಗಿದೆ. |
| ಆ) | ಯಾವ ಯಾವ ಯೋಜನೆಗಳಿಗೆ ಯಾವ ಯಾವ ಫಲಾನುಭವಿ ಆಯ್ಕೆ ಮಾಡಲಾಗಿದೆ (ಯೋಜನೆವಾರು ಮತ್ತು ಫಲಾನುಭವಿವಾರು ಮಾಹಿತಿ ಒದಗಿಸುವುದು; | ಅನುಬಂಧ-2A, 2B, 2C (ಸಿ.ಡಿಯಲ್ಲಿ) ರಲ್ಲಿ ಒದಗಿಸಲಾಗಿದೆ. |
| ಇ) | ತೋಟಗಾರಿಕೆ ಬೆಳೆಗಳನ್ನು ಉತ್ತೇಜಿಸಲು ಸರ್ಕಾರ ಕೈಗೊಂಡ ಕ್ರಮಗಳೇನು (ಮಾಹಿತಿ ನೀಡುವುದು); | ಇಲಾಖೆಯ ವತಿಯಿಂದ ರೈತರಿಗೆ ತಾಂತ್ರಿಕ ತರಬೇತಿಗಳ ಮುಖಾಂತರ ತೋಟಗಾರಿಕಾ ಬೆಳೆಗಳನ್ನು ಬೆಳೆಯಲು ಉತ್ತೇಜಿಸಲಾಗುತ್ತಿದೆ. ಈ ಕೆಳಕಂಡ ಯೋಜನೆಗಳ ಮುಖಾಂತರ ಸಹಾಯಧನ ನೀಡಲಾಗುತ್ತಿದೆ.<br>• ರಾಷ್ಟ್ರೀಯ ತೋಟಗಾರಿಕೆ ಮಿಷನ್<br>• ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ)<br>• ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ<br>• ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ<br>• ಸಮಗ್ರ ತೋಟಗಾರಿಕಾ ಅಭಿವೃದ್ಧಿ<br>• ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ<br>• ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ<br>• ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ<br>• ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ |

| | | |
|---|---|---|
| ಈ) | ಪ್ರಸ್ತುತ ತೋಟಗಾರಿಕೆ ಇಲಾಖೆಯಿಂದ ಯಾವ ಯಾವ ಬೆಳೆಗಳಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ (ವಿವರ ನೀಡುವುದು); | ಇಲಾಖೆಯಿಂದ ಈ ಕೆಳಗಿನ ತೋಟಗಾರಿಕೆ ಬೆಳೆಗಳಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ.<br>ಹಣ್ಣಿನ ಬೆಳೆಗಳು: ಮಾವು, ಬಾಳೆ, ಕಿತ್ತಳೆ, ಸೀಬೆ, ಸಪೋಟ, ಅನಾನಸ್, ದಾಳಿಂಬೆ, ಪಪ್ಪಾಯ, ದ್ರಾಕ್ಷಿ, ಸೀತಾಫಲ, ಬೋರೆ, ಅಂಜೂರ ಮತ್ತು ನೆಲ್ಲಿಕಾಯಿ ಇತ್ಯಾದಿ.<br>ತರಕಾರಿ ಬೆಳೆಗಳು: ಆಲೂಗಡ್ಡೆ, ಟೊಮ್ಯಾಟೊ, ಬದನೆ, ಈರುಳ್ಳಿ, ಹುರುಳಿಕಾಯಿ, ಮೆಣಸಿನಕಾಯಿ, ಬೆಂಡೆಕಾಯಿ, ದಪ್ಪ ಮೆಣಸಿನಕಾಯಿ, ನುಗ್ಗೆಕಾಯಿ ಮತ್ತು ಕುಂಬಳ ಜಾತಿಯ ತರಕಾರಿಗಳು ಇತ್ಯಾದಿ.<br>ಹೂವಿನ ಬೆಳೆಗಳು: ಆಸ್ಟರ್, ಕನಕಾಂಬರ, ಚೆಂಡು ಹೂ, ಮಲ್ಲಿಗೆ, ಸೇವಂತಿಗೆ, ಸುಗಂಧರಾಜ, ಗುಲಾಬಿ, ಗ್ಲಾಡಿಯೋಲಸ್, ಬರ್ಡ್ ಆಫ್ ಪ್ಯಾರಡೈಸ್, ಆಂಥೂರಿಯಂ, ಜರ್ಬೆರ ಇತ್ಯಾದಿ.<br>ತೋಟದ ಬೆಳೆಗಳು ಮತ್ತು ಸಾಂಬಾರು ಬೆಳೆಗಳು: ತೆಂಗು, ಕೋಕೋ, ತಾಳೆ ಬೆಳೆ, ಗೋಡಂಬಿ, ಮೆಣಸು, ಏಲಕ್ಕಿ, ಶುಂಠಿ, ಅರಿಶಿಣ, ವೀಳ್ಯದೆಲೆ, ಬೆಳ್ಳುಳ್ಳಿ ಇತ್ಯಾದಿ.<br>ಔಷದೀಯ ಮತ್ತು ಸುಗಂಧ ಧ್ರುವ್ಯ ಬೆಳೆಗಳು: ಹಿಪ್ಪಲಿ, ಅಶ್ವಗಂಧ, ಧವನ, ಪಚೌಲಿ, ತುಳಸಿ ಮತ್ತು ಜೆರೇನಿಯಮ್ ಇತ್ಯಾದಿ. |
| ಉ) | ಈ ಇಲಾಖೆಯಲ್ಲಿರುವ ಯೋಜನೆಗಳಾವುವು? | ಅನುಬಂಧ-3 ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ:HORTI 30 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಕರ್ನಾಟಕಸರ್ಕಾರ

ಸಂಖ್ಯೆ: HORTI 33 HGM 2021

ಕರ್ನಾಟಕಸರ್ಕಾರದಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 28-01-2021

99 u/s
29/01/2021

ಇವರಿಂದ:
ಸರ್ಕಾರದ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ಶಿವಾನಂದ ಎಸ್.ಪಾಟೀಲ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:212ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಶಿವಾನಂದ ಎಸ್.ಪಾಟೀಲ್, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:212ಕ್ಕೆ ಉತ್ತರದ 25 ಪ್ರತಿಗಳನ್ನುಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮನಂಬುಗೆಯ

T.V. Sunandamma
(ಟಿ.ವಿ.ಸುನಂದಮ್ಮ) 28/01/2021
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

28/1

**ಕರ್ನಾಟಕ ವಿಧಾನ ಸಭೆ**

1 ಚುಕ್ಕೆ ಗುರುತಿಲ್ಲದ ಪ್ರಶ್ನೆ : 212
2 ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್.ಪಾಟೀಲ್
3 ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ರೇಷ್ಮೆ ಸಚಿವರು
4 ಉತ್ತರಿಸಬೇಕಾದ ದಿನಾಂಕ : 29/01/2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆ ಜಾರಿಯಲ್ಲಿದೆಯೆ; | ಜಾರಿಯಲ್ಲಿದೆ. |
| ಆ) | ಇದ್ದಲ್ಲಿ 2019-20 2020-21 ನೇ ಸಾಲಿನಲ್ಲಿ ತೋಟಗಾರಿಕೆ ಅಭಿವೃದ್ಧಿ ಯೋಜನೆಗೆ ಹೊಸದಾಗಿ ಎಷ್ಟು ಅನುದಾನವನ್ನು ಒದಗಿಸಲಾಗಿದೆ; ಅನುದಾನ ಒದಗಿಸದೇ ಇದ್ದಲ್ಲಿ ಅದಕ್ಕೆ ಕಾರಣಗಳೇನು? (ವಿವರ ನೀಡುವುದು) | 2019-20, 2020-2021 ನೇ ಸಾಲಿನಲ್ಲಿ ತೋಟಗಾರಿಕೆ ಅಭಿವೃದ್ಧಿ ಯೋಜನೆಗೆ ಅನುಕ್ರಮವಾಗಿ ರೂ.12970.00 ಲಕ್ಷ ಮತ್ತು ರೂ.12644.90 ಲಕ್ಷಗಳನ್ನು ಒದಗಿಸಲಾಗಿರುತ್ತದೆ.<br>ಆದರೆ, 2020-2021 ನೇ ಸಾಲಿಗೆ ಒದಗಿಸಲಾದ ಸಂಪೂರ್ಣ ಅನುದಾನವನ್ನು ಕೋವಿಡ್-19 ಕಾರಣದಿಂದಾಗಿ ಆರ್ಥಿಕ ಸಂಕಷ್ಟಕ್ಕೆ ಒಳಗಾಗಿರುವ ಹೂವು, ಹಣ್ಣು ಮತ್ತು ತರಕಾರಿ ಬೆಳೆಗಾರರಿಗೆ ಪರಿಹಾರ ನೀಡುವ ಸಲುವಾಗಿ ಬಳಸಿಕೊಳ್ಳಲಾಗುತ್ತಿದೆ. ಹೀಗಾಗಿ, ಇತರೆ ಮುಂದುವರೆದ ಘಟಕ ಕಾರ್ಯಕ್ರಮಗಳಿಗೆ ಯಾವುದೇ ಅನುದಾನ ಲಭ್ಯವಿರುವುದಿಲ್ಲ. |

Horti 33 HGM 2021

(ಆರ್.ಶಂಕರ್)

ತೋಟಗಾರಿಕೆ ಮತ್ತು ರೇಷ್ಮೆ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 21 ಐಎಪಿ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021.

72
L/S
29/01/2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ|| ಪರಮೇಶ್ವರ ಜಿ. (ಕೊರಟಗೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 268ಕ್ಕೆ ಉತ್ತರಿಸುವ ಬಗ್ಗೆ.

---*---

ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ|| ಪರಮೇಶ್ವರ ಜಿ. (ಕೊರಟಗೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 268ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಎನ್. ಕುಮಾರ್

(ಎನ್. ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

28/01/2021

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 268
2. ಸದಸ್ಯರ ಹೆಸರು : ಡಾ|| ಪರಮೇಶ್ವರ್ ಜಿ. (ಕೊರಟಗೆರೆ)
3. ಉತ್ತರಿಸುವ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ತುಮಕೂರಿನ ವಸಂತನರಸಾಪುರ ಕೈಗಾರಿಕಾ ಪ್ರದೇಶದಲ್ಲಿ ಮೊದಲ ಮತ್ತು ಎರಡನೇ ಹಂತದಲ್ಲಿ (2008-09) ಹಂಚಿಕೆ ಮಾಡಲಾದ ಕೈಗಾರಿಕಾ ನಿವೇಶನಗಳಿಗೆ ಅವುಗಳ ಅಳತೆಗನುಗುಣವಾಗಿ ನಿಗದಿಪಡಿಸಲಾದ ಮೂಲ ಬೆಲೆ ಎಷ್ಟು; | ತುಮಕೂರು ಜಿಲ್ಲೆ, ವಸಂತನರಸಾಪುರ ಕೈಗಾರಿಕಾ ಪ್ರದೇಶದ 1 ಮತ್ತು 2ನೇ ಹಂತದ ನಿವೇಶನಗಳ ತಾತ್ಕಾಲಿಕ ಮೂಲ ಬೆಲೆಯನ್ನು ಈ ಕೆಳಕಂಡ ದಿನಾಂಕಗಳಂದು ನಡೆದ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಸಭೆಗಳಲ್ಲಿ ನಿಗದಿಪಡಿಸಲಾಗಿದೆ :- |

| ಕ್ರ. ಸಂ. | ಮಂಡಳಿ ಸಭೆಯ ದಿನಾಂಕ | ತಾತ್ಕಾಲಿಕ ದರ ಪ್ರತಿ ಎಕರೆಗೆ |
|---|---|---|
| | **ವಸಂತನರಸಾಪುರ ಕೈಗಾರಿಕಾ ಪ್ರದೇಶದ 1ನೇ ಹಂತ** | |
| 1. | 19.12.2008 | Rs.24.50 lakhs + Rs.2.50 lakhs per acre towards prorata cost of water supply |
| 2. | 27.09.2010 | Rs.30.00 lakhs + Rs.2.50 lakhs per acre towards prorata cost of water supply |
| 3. | 02.03.2013 | Rs.68.00 lakhs |
| 4. | 29.01.2015 | Rs.70.00 lakhs |
| 5. | 12.07.2019 | Rs.105.25 lakhs |
| 6. | 22.12.2020 | Rs.105.00 Lakhs (Annex layout of 1st Phase) |
| | **ವಸಂತನರಸಾಪುರ ಕೈಗಾರಿಕಾ ಪ್ರದೇಶದ 2ನೇ ಹಂತ** | |
| 1. | 02.03.2013 | Rs.68.00 lakhs |
| 2. | 12.07.2019 | Rs.105.25 lakhs |
| 3. | 19.06.2020 | Rs.105.00 Lakhs (Sub-layout of 2nd & 3rd Phase) |

| | | |
|---|---|---|
| (ಆ) | ಸದರಿ ನಿವೇಶನಗಳನ್ನು ಉದ್ಯಮಿಗಳಿಗೆ ಹಸ್ತಾಂತರಿಸುವ ಸಂದರ್ಭದಲ್ಲಿ ಸದ್ಯ ಹೆಚ್ಚಳ ಮಾಡಲಾಗಿರುವ ಶೇಖಡವಾರು ಬೆಲೆ ಎಷ್ಟು; | ದಿನಾಂಕ: 12.07.2019ರಂದು ನಡೆದ 362ನೇ ಮಂಡಳಿ ಸಭೆಯಲ್ಲಿ ವಸಂತನರಸಾಪುರ ಕೈಗಾರಿಕಾ ಪ್ರದೇಶದ 1 ಮತ್ತು 2ನೇ ಹಂತದ ಕೈಗಾರಿಕಾ ಪ್ರದೇಶಗಳಿಗೆ ನಿಗದಿಪಡಿಸಿರುವ ಅಂತಿಮ ದರ ಈ ಕೆಳಕಂಡಂತಿದೆ:- |

| ಕ್ರ. ಸಂ. | ತಾತ್ಕಾಲಿಕ ದರ ಪ್ರತಿ ಎಕರೆಗೆ | ಅಂತಿಮ ದರ ಪ್ರತಿ ಎಕರೆಗೆ (ರೂ. ಲಕ್ಷಗಳಲ್ಲಿ) | ಶೇಕಡಾ ವಾರು |
|---|---|---|---|
| **ವಸಂತನರಸಾಪುರ ಕೈಗಾರಿಕಾ ಪ್ರದೇಶ, 1ನೇ ಹಂತ** | | | |
| 1. | Rs.24.50 lakhs + Rs.2.50 lakhs per acre towards prorata cost of water supply | ರೂ.57.75 | 46.75% |
| 2. | Rs.30.00 lakhs + Rs.2.50 lakhs per acre towards prorata cost of water supply | ರೂ.64.25 | 50.58% |
| 3. | Rs.68.00 lakhs | ರೂ.103.25 | 65.85% |
| 4. | Rs. 70.00 lakhs | ರೂ.105.25 | 66.50% |
| 5. | Rs.105.25 lakhs | Final price yet to be fixed | |
| 6. | Rs.105.00 Lakhs | | |
| **ವಸಂತನರಸಾಪುರ ಕೈಗಾರಿಕಾ ಪ್ರದೇಶ, 2ನೇ ಹಂತ** | | | |
| 1. | Rs.24.50 lakhs + Rs.2.50 lakhs per acre towards prorata cost of water supply | ರೂ.60.75 | 44.44% |
| 2. | Rs.30.00 lakhs + Rs.2.50 lakhs per acre towards prorata cost of water supply | ರೂ.71.75 | 45.29% |
| 3. | Rs.68.00 lakhs | ರೂ.104.75 | 64.91% |
| 4. | Rs.105.25 lakhs | Final price yet to be fixed | |
| 5. | Rs.105.00 Lakhs | | |

| | | |
|---|---|---|
| (ಇ) | ಕೆ.ಐ.ಎ.ಡಿ.ಬಿ.ಯಿಂದ ಕೈಗಾರಿಕಾ ಪ್ರದೇಶದಲ್ಲಿ ಅನಗತ್ಯ ಕಾಮಗಾರಿಗಳನ್ನು ಕೈಗೊಂಡು, ಅದರ ಹೊರೆಯನ್ನು ಉದ್ಯಮಿಗಳ | ಕೆ.ಐ.ಎ.ಡಿ.ಬಿ.ಯಿಂದ ರಚನೆಯಾಗಿರುವ ಕೈಗಾರಿಕಾ ಪ್ರದೇಶಗಳಲ್ಲಿ ಯಾವುದೇ ಅನಗತ್ಯ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. |



# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 19 ಐಎಪಿ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021.

98
u/s
29/01/2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನ ಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 211ಕ್ಕೆ ಉತ್ತರಿಸುವ ಬಗ್ಗೆ.

---*---

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನ ಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 211ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಎನ್. ಕುಮಾರ್

(ಎನ್. ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

28/01/2021

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 211
2. ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ)
3. ಉತ್ತರಿಸುವ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ವಿಜಯಪುರ ಜಿಲ್ಲೆಯ ಮುಳವಾಡ ಹತ್ತಿರ ಕೈಗಾರಿಕೆಗಳ ಸ್ಥಾಪನೆಗೆ ಅನುಕೂಲವಾಗುವಂತೆ ಎಷ್ಟು ಪ್ರದೇಶವನ್ನು ಅಭಿವೃದ್ಧಿಪಡಿಸಲಾಗಿದೆ; ಹಾಗೂ ಇನ್ನು ಎಷ್ಟು ಪ್ರದೇಶವನ್ನು ಅಭಿವೃದ್ಧಿಪಡಿಸಬೇಕಾಗಿದೆ; | ವಿಜಯಪುರ ಜಿಲ್ಲೆ, ಮುಳವಾಡ ಹತ್ತಿರ ಕೈಗಾರಿಕೆಗಳ ಸ್ಥಾಪನೆಗೆ ಮೊದಲನೇ ಹಂತದಲ್ಲಿ 564.50 ಎಕರೆ ಪ್ರದೇಶವನ್ನು ಅಭಿವೃದ್ಧಿಪಡಿಸಲಾಗಿದೆ.<br>ಉಳಿದ 2465.53 ಎಕರೆ ಪ್ರದೇಶವನ್ನು ಹಂತ ಹಂತವಾಗಿ ಅಭಿವೃದ್ಧಿಪಡಿಸಬೇಕಾಗಿದೆ. |
| (ಆ) | ಬಾಕಿಯಿರುವ ಕೈಗಾರಿಕಾ ಪ್ರದೇಶವನ್ನು ಅಭಿವೃದ್ಧಿಪಡಿಸಲು ಯೋಜನೆ ರೂಪಿಸಲಾಗಿದೆಯೇ; ಅದಕ್ಕಾಗಿ ತಗುಲುವ ವೆಚ್ಚವೆಷ್ಟು, ಯಾವಾಗ ಅಭಿವೃದ್ಧಿಪಡಿಸಲಾಗುವುದು? | ಬಾಕಿಯಿರುವ ಕೈಗಾರಿಕಾ ಪ್ರದೇಶವನ್ನು ಬೇಡಿಕೆಗನುಗುಣವಾಗಿ ಅಭಿವೃದ್ಧಿಪಡಿಸಬೇಕಾಗಿರುತ್ತದೆ. |

ಸಂಖ್ಯೆ: ಸಿಐ 19 ಐಎಪಿ (ಇ) 2021

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 14 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 29.01.2021.

57
C/S
29/1/2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಹದೇವ.ಕೆ (ಪಿರಿಯಾಪಟ್ಟಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 167ಕ್ಕೆ ಉತ್ತರ ಕಳುಹಿಸುವ ಬಗ್ಗೆ.

~** **~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಹದೇವ.ಕೆ (ಪಿರಿಯಾಪಟ್ಟಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 167ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಲತಾ.ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ.

29/1



# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 167 |
| ಸದಸ್ಯರ ಹೆಸರು | : | ಶ್ರೀ ಮಹದೇವ.ಕೆ (ಪಿರಿಯಾಪಟ್ಟಣ) |
| ಉತ್ತರಿಸಬೇಕಾದ ದಿನಾಂಕ | : | 29-01-2021 |
| ಉತ್ತರಿಸುವವರು | : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪಿರಿಯಾಪಟ್ಟಣ ಪುರಸಭೆಯ ವ್ಯಾಪ್ತಿಯ ಬಡಾವಣೆಗಳಲ್ಲಿ ಎಷ್ಟು ನಿವೇಶನಗಳನ್ನು ಇ-ಸ್ವತ್ತಿಗೆ ಒಳಪಟ್ಟಿವೆ; ಎಷ್ಟು ನಿವೇಶನಗಳು ಇ-ಸ್ವತ್ತಿಗೆ ಒಳಪಟ್ಟಿರುವುದಿಲ್ಲ; (ವಿವರ ನೀಡುವುದು) | ಪಿರಿಯಾಪಟ್ಟಣ ಪುರಸಭಾ ವ್ಯಾಪ್ತಿಯ ಬಡಾವಣೆಗಳಲ್ಲಿ 2658 ನಿವೇಶನಗಳು ಇ-ಆಸ್ತಿಗೆ ಒಳಪಟ್ಟಿರುತ್ತವೆ ಹಾಗೂ 1878 ನಿವೇಶನಗಳು ಇ-ಆಸ್ತಿಗೆ ಒಳಪಟ್ಟಿರುವುದಿಲ್ಲ. |
| ಆ) | ಪುರಸಭೆಯ ವ್ಯಾಪ್ತಿಯ ಬಡಾವಣೆಗಳಲ್ಲಿ ಎಷ್ಟು ನಿವೇಶನಗಳನ್ನು ಇ-ಸ್ವತ್ತುಗಳಾಗಿ ಇದುವರೆಗೆ ಒಳಪಡಿಸಲು ಸಾಧ್ಯವಾಗದಿರಲು ಕಾರಣವೇನು; (ವಿವರ ನೀಡುವುದು) | ಪಿರಿಯಾಪಟ್ಟಣ ಪಟ್ಟಣ ಪಂಚಾಯಿತಿಯು ಸರ್ಕಾರದ ಆದೇಶ ಸಂಖ್ಯೆ: ನಅಇ 132 ಎಂಎಲ್ಆರ್ 2014, ಬೆಂಗಳೂರು ದಿನಾಂಕ: 15.05.2015ರಂತೆ ಪುರಸಭೆಯಾಗಿ 2015ರಲ್ಲಿ ಮೇಲ್ದರ್ಜೆಗೇರಿಸಲಾಗಿರುತ್ತದೆ ಹಾಗೂ ಈ ಹಿಂದೆ ಪಟ್ಟಣ ಪಂಚಾಯಿತಿಯಾಗಿದ್ದ ಸಂದರ್ಭದಲ್ಲಿ ಆಸ್ತಿಗಳ ಸರ್ವೆಯನ್ನು ಮಾಡಿ ಪಿಐಡಿ ಗಳನ್ನು ನೀಡಲಾಗಿರುತ್ತದೆ. ಸದರಿ ಆಸ್ತಿಗಳಿಗೆ ಇ-ಆಸ್ತಿ ತಂತ್ರಾಂಶದ ಮೂಲಕ ಹೆಚ್ಚಿನ ಮಾಹಿತಿಯನ್ನು ದಾಖಲಿಸಿ ನಮೂನೆ-3 ರನ್ನು ಸೃಜನೆ ಮಾಡಬೇಕಿರುತ್ತದೆ. ಆಸ್ತಿಗಳ ಸರ್ವೆಯಾದ ನಂತರ ಹೊಸದಾಗಿ ಸೇರ್ಪಡೆಗೊಂಡಿರುವ ಬಡಾವಣೆಗಳನ್ನು / ಆಸ್ತಿಗಳನ್ನು ಇ-ಆಸ್ತಿ ತಂತ್ರಾಂಶದಲ್ಲಿ ಸೇರ್ಪಡೆಗೊಳಿಸಲು ಅವಕಾಶವಿರುತ್ತದೆ.<br>ಪಟ್ಟಣ ಪಂಚಾಯಿತಿಯು ಪುರಸಭೆಯಾಗಿ ಮೇಲ್ದರ್ಜೆಗೇರಿದ ನಂತರ ಹಲವು ಗ್ರಾಮ ಪಂಚಾಯಿತಿ ಪ್ರದೇಶಗಳು ಪುರಸಭೆಗೆ ವಿಲೀನಗೊಂಡಿದ್ದು, ನಿರ್ದೇಶನಾಲಯದಿಂದ ಕೈಬರಹದ ನಮೂನೆ-3 ಅನ್ನು ನೀಡಲು ರದ್ದುಗೊಳಿಸಿರುವುದರಿಂದ ನಾಗರೀಕರ ಬೇಡಿಕೆಯ ಮೇರೆಗೆ ಹಂತ ಹಂತವಾಗಿ ಇ-ಆಸ್ತಿ ತಂತ್ರಾಂಶದಲ್ಲಿ ದಾಖಲಿಸಲಾಗುತ್ತಿದೆ. |
| ಇ) | ಪುರಸಭೆಯ ಬಡಾವಣೆಯ ಎಲ್ಲಾ ನಿವೇಶನಗಳನ್ನು ಇ-ಸ್ವತ್ತುಗಳಾಗಿ ಒಳಪಡಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಇ-ಆಸ್ತಿ ತಂತ್ರಾಂಶದಲ್ಲಿ ಆಸ್ತಿಗಳಿಗೆ ಆಸ್ತಿ ಗುರುತಿನ ಸಂಖ್ಯೆಯು (PIUD) ಸ್ವಯಂ ಚಾಲಿತವಾಗಿ ಸೃಜನೆಯಾಗುವ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲಾಗಿದೆ ಮತ್ತು ನಗರ ಸ್ಥಳೀಯ ಸಂಸ್ಥೆಗಳ ಹಂತದಲ್ಲಿಯೇ ಹೊಸ ಬಡಾವಣೆಗಳ ರಸ್ತೆಗಳನ್ನು ಸೇರ್ಪಡೆಗೊಳಿಸಲು ತಂತ್ರಾಂಶದಲ್ಲಿ ಅವಕಾಶಕಲ್ಪಿಸಲಾಗಿರುತ್ತದೆ. ಇದರಿಂದ ನಗರ ಸ್ಥಳೀಯ ಸಂಸ್ಥೆಗಳು ಈ ಹಿಂದೆ ಪಿಐಡಿ ನೀಡಲು ಆಗುತ್ತಿದ್ದ |

| | | |
|---|---|---|
| | | ವಿಳಂಬವನ್ನು ತಪ್ಪಿಸಲಾಗಿದೆ. ಮೊಬೈಲ್ ತಂತ್ರಾಂಶವನ್ನೂ ಕೂಡ ಅಭಿವೃದ್ಧಿಗೊಳಿಸಲಾಗುತ್ತಿದ್ದು ಇನ್ನೂ ಕೆಲವೇ ದಿನಗಳಲ್ಲಿ ಇದನ್ನು ನಗರ ಸ್ಥಳೀಯ ಸಂಸ್ಥೆಗಳಿಗೆ ಲಭ್ಯವಾಗುವಂತೆ ಮಾಡಲಾಗುವುದು. ಮೊಬೈಲ್ ತಂತ್ರಾಂಶವು ಲಭ್ಯವಾದ ನಂತರ ನಗರ ಸ್ಥಳೀಯ ಸಂಸ್ಥೆಗಳು ಸ್ಥಳದಲ್ಲಿಯೇ ಆಸ್ತಿಗಳ ಮಾಹಿತಿಯನ್ನು ದಾಖಲಿಸಬಹುದಾಗಿರುತ್ತದೆ.<br>ರಾಜ್ಯದ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ವಾರ್ಡವಾರು ಎಲ್ಲಾ ಆಸ್ತಿಗಳನ್ನು ಹಂತ ಹಂತವಾಗಿ ಇ-ಆಸ್ತಿ ತಂತ್ರಾಂಶದಲ್ಲಿ ದಾಖಲಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ: ನಅಇ 14 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 20 ಐಎಪಿ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 28.01.2021.

15
U/S
29/01/2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೇಮಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 220ಕ್ಕೆ ಉತ್ತರಿಸುವ ಬಗ್ಗೆ.

---*---

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೇಮಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 220ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಎನ್. ಕುಮಾರ್

(ಎನ್. ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

28/01/2021

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 220
2. ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)
3. ಉತ್ತರಿಸುವ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೀದರ್ ಜಿಲ್ಲೆಯಲ್ಲಿ ಕೊಲ್ಹಾರ್ ಕೈಗಾರಿಕಾ ಪ್ರದೇಶದಲ್ಲಿ ತ್ಯಾಜ್ಯ ಸಂಸ್ಕರಣೆ ಮಾಡಲು ಕಾಮನ್ ಎಫ್ಲೂಯೆಂಟ್ ಟ್ರೀಟ್‌ಮೆಂಟ್ ಪ್ಲಾಂಟ್ (Common Effluent Treatment Plant) ನಿರ್ಮಾಣ ಮಾಡಲಾಗುತ್ತಿದೆಯೇ; | ಹೌದು. |
| (ಆ) | ಹಾಗಿದ್ದಲ್ಲಿ, ಸದರಿ ಘಟಕವನ್ನು ನಿರ್ಮಾಣ ಮಾಡಲು ಎಷ್ಟು ಅನುದಾನವನ್ನು ಮಂಜೂರು ಮಾಡಲಾಗಿದೆ; | ಸದರಿ ಘಟಕವನ್ನು ನಿರ್ಮಾಣ ಮಾಡಲು ರೂ.5.40 ಕೋಟಿಗಳ ಅನುದಾನವು ಕೇಂದ್ರ ಸರ್ಕಾರದಿಂದ ಮಂಜೂರಾಗಿರುತ್ತದೆ. |
| (ಇ) | ಸದರಿ ಘಟಕದ ನಿರ್ಮಾಣ ಕಾರ್ಯವನ್ನು ಯಾವಾಗ ಪ್ರಾರಂಭಿಸಲಾಗಿದೆ; ಯಾವಾಗ ಪೂರ್ಣಗೊಳಿಸಲಾಗುವುದು; | ಸದರಿ ಘಟಕದ ನಿರ್ಮಾಣ ಕಾಮಗಾರಿಗಾಗಿ ದಿನಾಂಕ: 20.03.2017ರಂದು ಕಾರ್ಯಾದೇಶ ನೀಡಲಾಗಿರುತ್ತದೆ.<br><br>Airforce Authority ರವರಿಂದ ನಿರಾಕ್ಷೇಪಣಾ ಪತ್ರವನ್ನು ಪಡೆಯುವುದು ತಡವಾದುದರಿಂದ ಕಾಮಗಾರಿಯ ಪ್ರಾರಂಭವು ವಿಳಂಬವಾಗಿರುತ್ತದೆ. |

| | | |
|---|---|---|
| | | ಪ್ರಸ್ತುತ Airforce Authority ರವರಿಂದ ನಿರಾಕ್ಷೇಪಣಾ ಪತ್ರವನ್ನು ಪಡೆಯಲಾಗಿದ್ದು ಕಾಮಗಾರಿಯು ಪ್ರಗತಿಯಲ್ಲಿರುತ್ತದೆ ಹಾಗೂ ಮಾರ್ಚ್ 2021 ರ ಒಳಗಾಗಿ ಪೂರ್ಣಗೊಳಿಸಲಾಗುವುದು. |
| (ಈ) | ಪ್ರಸ್ತುತ ಈ ಘಟಕದ ನಿರ್ಮಾಣ ಕಾರ್ಯವು ಯಾವ ಹಂತದಲ್ಲಿದೆ, ನಿಗದಿತ ಅವಧಿಯೊಳಗೆ ಪೂರ್ಣಗೊಳಿಸಲಾಗುವುದೆ? | ಪ್ರಸ್ತುತ ಈ ಘಟಕದ ನಿರ್ಮಾಣ ಕಾರ್ಯವು ಶೇಕಡ 85ರಷ್ಟು ಪೂರ್ಣಗೊಂಡಿದ್ದು, ನಿಗದಿತ ಅವಧಿಯೊಳಗೆ ಸಂಪೂರ್ಣ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು. |

ಸಂಖ್ಯೆ: ಸಿಐ 20 ಐಎಪಿ (ಇ) 2021

(ಜಗದೀಶ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು



**File No:** SERI/23/SLK/2021-SERI Sec-SERICULTURE SEC

ಕರ್ನಾಟಕ ಸರ್ಕಾರ

ಸಂಖ್ಯೆ:ರೇಷ್ಮೆ 23 ರೇಕೃವಿ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸಸೌಧ,
ಬೆಂಗಳೂರು, ದಿನಾಂಕ: 28-01-2021

61
u/s
29/1/21

ಇಂದ,
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

ಇವರಿಗೆ,
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮುನಿಯಪ್ಪ.ವಿ (ಶಿಡ್ಲಘಟ್ಟ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 82ಕ್ಕೆ ಉತ್ತರಿಸುವ ಕುರಿತು.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮುನಿಯಪ್ಪ.ವಿ (ಶಿಡ್ಲಘಟ್ಟ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 82ಕ್ಕೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಹೆಚ್. ವನಿತ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ(ರೇಷ್ಮೆ)

ಪ್ರತಿ:

1. ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 82
ಸದಸ್ಯರ ಹೆಸರು : ಶ್ರೀ ಮುನಿಯಪ್ಪ.ವಿ (ಶಿಡ್ಲಘಟ್ಟ)
ಉತ್ತರಿಸುವ ದಿನಾಂಕ : 29/01/2021
ಉತ್ತರಿಸುವವರು : ಮಾನ್ಯ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

| | ಪ್ರಶ್ನೆಗಳು | ಉತ್ತರ |
|---|---|---|
| ಅ | ರೇಷ್ಮೆ ಬೆಲೆ ಕುಸಿತದಿಂದಾಗಿ ರೇಷ್ಮೆ ಬೆಳೆಗಾರರು ಸಂಕಷ್ಟದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ರೇಷ್ಮೆ ಬೆಳೆಗಾರರ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಕೋವಿಡ್-19 ನಿಂದಾಗಿ ರೇಷ್ಮೆ ಗೂಡಿನ ಬೆಲೆ ಕುಸಿತವಾದ ಸಂಧರ್ಭದಲ್ಲಿ ರೇಷ್ಮೆ ಬೆಳೆಗಾರರು ಬೆಳೆದ ಪ್ರತಿ ಕೆಜಿ ಮಿಶ್ರತಳಿ ಗೂಡಿಗೆ ರೂ. 30/- ರಂತೆ ಹಾಗೂ ದ್ವಿತಳಿ ಗೂಡಿಗೆ ರೂ. 50/- ರಂತೆ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಿ ರೇಷ್ಮೆ ನೂಲು ಬಿಚ್ಚಾಣಿಕೆದಾರರಿಗೆ ಒತ್ತೆ ಸಾಲ ನೀಡಲಾಗಿದೆ ಹಾಗೂ ಕಚ್ಚಾ ರೇಷ್ಮೆಯನ್ನು ಖರೀದಿಸಲಾಗಿದೆ. |
| ಆ | ರೇಷ್ಮೆ ಬೆಳೆಗಾರರು ಬೆಳೆದ ರೇಷ್ಮೆ ಗೂಡಿಗೆ ನೀಡುವಂತಹ ಪ್ರೋತ್ಸಾಹ ಧನವನ್ನು ಹೆಚ್ಚಿಸಲು ಸರ್ಕಾರಕ್ಕೆ ಇರುವ ತೊಂದರೆಯೇನು; | ಏಪ್ರಿಲ್-2020 ರಿಂದ ಸೆಪ್ಟೆಂಬರ್-2020 ರವರೆಗೆ ರೇಷ್ಮೆ ಗೂಡಿನ ಬೆಲೆ ಕುಸಿತವಾದ ಸಂಧರ್ಭದಲ್ಲಿ ರೇಷ್ಮೆ ಬೆಳೆಗಾರರು ಬೆಳೆದ ಪ್ರತಿ ಕೆಜಿ ಮಿಶ್ರತಳಿ ಗೂಡಿಗೆ ರೂ. 30/- ರಂತೆ ಹಾಗೂ ದ್ವಿತಳಿ ಗೂಡಿಗೆ ರೂ. 50/- ರಂತೆ ಪ್ರೋತ್ಸಾಹಧನವನ್ನು ನೀಡಲಾಗಿದೆ. ಪ್ರಸ್ತುತ ರೇಷ್ಮೆ ಗೂಡಿನ ಬೆಲೆಗಳು ಉತ್ತಮವಾಗಿರುವುದರಿಂದ ಪ್ರೋತ್ಸಾಹಧನ ಹೆಚ್ಚಿಸುವ ಪ್ರಮೇಯ ಇರುವುದಿಲ್ಲ. |
| ಇ | ಈ ಹಿಂದೆ ರೇಷ್ಮೆ ಹುಳು ಸಾಕಾಣಿಕೆ ಮನೆ ನಿರ್ಮಾಣ ಮಾಡಲು ಸರ್ಕಾರದಿಂದ ನೀಡುತ್ತಿದ್ದ ಸಬ್ಸಿಡಿ ಹಣ ಮುಂದುವರಿಸಲಾಗಿದೆಯೇ; (ವಿವರ ನೀಡುವುದು) | ಹೌದು.<br>ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ 2018-19ನೇ ಸಾಲಿನಿಂದ ಇಲ್ಲಿಯವರೆಗೆ ನಿರ್ಮಿಸಲಾಗಿರುವ 653 ಪ್ರತ್ಯೇಕ ಹುಳು ಸಾಕಾಣಿಕೆ ಮನೆಗಳಿಗೆ ಸಬ್ಸಿಡಿ ನೀಡಲು ಅನುಮೋದನೆ ನೀಡಲಾಗಿದೆ. ಆದಾಗ್ಯೂ ಇಲ್ಲಿಯವರೆಗೆ 604 ರೇಷ್ಮೆ ಹುಳು ಸಾಕಾಣಿಕೆ ಮನೆಗಳಿಗೆ ಸಹಾಯಧನವಾಗಿ ಒಟ್ಟು 1350.955 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. |
| ಈ | ಹಾಗಿದ್ದಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಸುಮಾರು 1000 ರೈತರಿಗೆ ಸಬ್ಸಿಡಿ ಹಣ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಗ್ಗೆ ರೈತರು ಇಲಾಖಾ ಅಧಿಕಾರಿಗಳಿಗೆ ಮನವಿ ನೀಡುವುದು ನಿಜವೇ; | |

<table>
<tr><td>ಉ</td><td>ಹಾಗಿದ್ದಲ್ಲಿ, ಈ ಹಿಂದೆ ನಿರ್ಮಾಣ ಮಾಡಿರುವ ಮನೆಗಳಿಗೆ 3 ಹಂತದ ಜಿ.ಪಿ.ಎಸ್ ಫೋಟೋ ತೆಗೆಯುವ ನಿಯಮ ಸಡಿಲಿಕೆ ಮಾಡಿ ಸಬ್ಸಿಡಿ ಹಣ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮವೇನು;</td><td>ಪ್ರತ್ಯೇಕ ರೇಷ್ಮೆ ಹುಳು ಸಾಕಾಣಿಕೆ ಮನೆ ನಿರ್ಮಾಣಕ್ಕೆ ಸಹಾಯಧನ ಮಂಜೂರಾತಿಗೆ ಮೂರು ಹಂತದ ಜಿ.ಪಿ.ಎಸ್ ಫೋಟೋ ನೀಡುವ ಮಾರ್ಗಸೂಚಿಯನ್ನು ಸರ್ಕಾರದ ಪತ್ರ ಸಂ:ತೋಇ 17 ರೇಕೃವಿ 2019 ದಿನಾಂಕ 08.05.2020 ರಲ್ಲಿ ಸಡಿಲಿಕೆ ಮಾಡಿಲಾಗಿದ್ದು, ಕೊನೆಯ ಹಂತದ ಒಂದು ಜಿ.ಪಿ.ಎಸ್ ಛಾಯಾಚಿತ್ರ ಹೊಂದಿದ್ದಲ್ಲಿ ರೇಷ್ಮೆ ಹುಳು ಸಾಕಾಣಿಕೆ ಮನೆಗೆ ಸಹಾಯಧನ ಮಂಜೂರಾತಿ ನೀಡಲು ಪರಿಷ್ಕರಿಸಿ ಅನುಮತಿ ನೀಡಲಾಗಿದೆ.</td></tr>
<tr><td>ಊ</td><td>ರೇಷ್ಮೆ ಹುಳು ಸಾಕಾಣಿಕೆ ಮನೆ ನಿರ್ಮಾಣ ಮಾಡಲು ಸರ್ಕಾರದ ಹೊಸಮಾರ್ಗಸೂಚಿಗಳೇನು;</td><td rowspan="2">ರೇಷ್ಮೆ ಹುಳು ಸಾಕಾಣಿಕೆ ಮನೆಯ ನಿರ್ಮಾಣಕ್ಕೆ, ಸದರಿ ಮನೆಯ ವಿಸ್ತೀರ್ಣವನ್ನಾಧರಿಸಿ ಕೆಳಕಂಡಂತೆ ಸಹಾಯಧನ ನೀಡಲಾಗುತ್ತಿದೆ.<br>(ಘಟಕ ದರ/ಸಹಾಯಧನ : ರೂ.ಲಕ್ಷಗಳಲ್ಲಿ)
<table>
<tr><td rowspan="2">ಕ್ರ. ಸಂ</td><td rowspan="2">ಮನೆಗಳ ಅಳತೆ (ಚ.ಅಡಿ)</td><td rowspan="2">ಘಟಕ ದರ</td><td colspan="2">ಸಹಾಯಧನ</td></tr>
<tr><td>ಸಾಮಾನ್ಯ ವರ್ಗಕ್ಕೆ</td><td>ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ</td></tr>
<tr><td>1</td><td>225</td><td>0.900</td><td>0.675</td><td>0.810</td></tr>
<tr><td>2</td><td>600</td><td>3.000</td><td>2.250</td><td>2.700</td></tr>
<tr><td>3</td><td>1000</td><td>4.000</td><td>3.000</td><td>3.600</td></tr>
<tr><td>4</td><td>ಕಡಿಮೆ ವೆಚ್ಚದ ಶೆಡ್ – 225 ರಿಂದ 1000 ಚದರ ಅಡಿ</td><td colspan="3">ಒಂದು ಚದರ ಅಡಿಗೆ ರೂ.100/-ರಂತೆ ಸಾಮಾನ್ಯ ವರ್ಗಕ್ಕೆ ಮತ್ತು ರೂ.120/-ರಂತೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಕನಿಷ್ಠ 225 ಚದರ ಅಡಿ ಗರಿಷ್ಠ 1000 ಚದರ ಅಡಿ ಶೆಡ್‌ಗಳಿಗೆ ಪ್ರೋರೇಟಾ ಆಧಾರದಲ್ಲಿ ಸಹಾಯಧನ ನೀಡಲಾಗುತ್ತಿದೆ.</td></tr>
</table></td></tr>
<tr><td>ಋ</td><td>ರೇಷ್ಮೆ ಹುಳು ಸಾಕಾಣಿಕೆ ಮನೆ ನಿರ್ಮಾಣ ಮಾಡಲು ಸರ್ಕಾರದಿಂದ ನೀಡುತ್ತಿರುವ ಸಹಾಯಧನವೆಷ್ಟು; ಸಹಾಯಧನ ಮಂಜೂರು ಮಾಡಲು ನಿಗಧಿಪಡಿಸಿರುವ ಮಾರ್ಗ ಸೂಚಿಗಳೇನು?</td></tr>
</table>

**ಸಂಖ್ಯೆ: ರೇಷ್ಮೆ 23 ರೇಕೃವಿ 2021**

**(ಆರ್. ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**



ಕರ್ನಾಟಕ ಸರ್ಕಾರ

ಸಂಖ್ಯೆ : ಸಿಒ 28 ಎಂಆರ್‌ಇ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:28.01.2021

122
ಬಿS
29/1/2021

ಇವರಿಂದ :

ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಹಕಾರ ಇಲಾಖೆ,
ಬಹುಮಹಡಿಕಟ್ಟಡ,
ಬೆಂಗಳೂರು.

ಇವರಿಗೆ :

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ
ಬೆಂಗಳೂರು.

ಮಾನ್ಯರೇ,

ವಿಷಯ : ಕರ್ನಾಟಕ ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:105ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ : ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/9ಅ/ಪ್ರ.ಸಂ.105/2021, ದಿನಾಂಕ:21.01.2021.

*****

ಮೇಲ್ಕಂಡ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ. ಇವರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:105ಕ್ಕೆ ದಿನಾಂಕ:29.01.2021ರಂದು ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಗೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ ಹಾಗೂ ಉತ್ತರವನ್ನು ಪಿ.ಡಿ.ಎಫ್ ಮಾದರಿಯಲ್ಲಿ ಇ-ಮೇಲ್ ಸಂಖ್ಯೆ: dsqb-kla-kar@nic.in ರ ಮೂಲಕ ಮುಂದಿನ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಬಿ.ಎಸ್.ಮಂಜುನಾಥ್)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಹಕಾರ ಇಲಾಖೆ.

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 105
2. ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ
3. ಉತ್ತರಿಸಬೇಕಾದ ದಿನಾಂಕ : 29.01.2021
4. ಉತ್ತರಿಸುವ ಸಚಿವರು : ಸಹಕಾರ ಸಚಿವರು

***

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ದೊಡ್ಡಬಳ್ಳಾಪುರ ಎ.ಪಿ.ಎಂ.ಸಿ ಪ್ರಾಂಗಣದಲ್ಲಿ ರೈತರಿಗೆ, ವರ್ತಕರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ದೊಡ್ಡಬಳ್ಳಾಪುರ ಎ.ಪಿ.ಎಂ.ಸಿ ಪ್ರಾಂಗಣದಲ್ಲಿ ರೈತರಿಗೆ, ವರ್ತಕರಿಗೆ ಮುಚ್ಚು ಹರಾಜುಕಟ್ಟೆ, ಮಳಿಗೆಗಳು, ಗೋದಾಮುಗಳು, ರಸ್ತೆ ಮತ್ತು ಚರಂಡಿ, ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯ, ಕ್ಯಾಂಟೀನ್, ರೈತಭವನ, ಸುತ್ತುಗೋಡೆ, ಬೀದಿದೀಪ ವ್ಯವಸ್ಥೆಯಂತಹ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿರುತ್ತದೆ. |
| ಆ | ಹಾಗಿದ್ದಲ್ಲಿ, ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | |

**ಸಂಖ್ಯೆ:ಸಿಒ 28 ಎಂಆರ್‌ಇ 2021**

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು



**ಕರ್ನಾಟಕ ಸರ್ಕಾರ**

**ಸಂಖ್ಯೆ:** ನಅಇ 15 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 29.01.2021.

91 u/s
29/01/2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರೇವಣ್ಣ.ಹೆಚ್.ಡಿ (ಹೊಳೆನರಸಿಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 119ಕ್ಕೆ ಉತ್ತರ ಕಳುಹಿಸುವ ಬಗ್ಗೆ.

~** **~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರೇವಣ್ಣ.ಹೆಚ್.ಡಿ (ಹೊಳೆನರಸಿಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 119ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

**(ಲತಾ.ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ.

29/1



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 119 |
| ಸದಸ್ಯರ ಹೆಸರು : | ಶ್ರೀ ರೇವಣ್ಣ.ಹೆಚ್.ಡಿ (ಹೊಳೆನರಸೀಪುರ) |
| ಉತ್ತರಿಸಬೇಕಾದ ದಿನಾಂಕ : | 29-01-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳೇನರಸೀಪುರ ಪುರಸಭೆಯ ವಾಣಿಜ್ಯ ಮಳಿಗೆಗಳ ಬಾಡಿಗೆ ಮತ್ತು ಠೇವಣಿ ಮೊತ್ತ ಹೆಚ್ಚಾಗಿರುವುದರಿಂದ ಸದರಿ ಮಳಿಗೆಗಳಿಗೆ ಯಾವ ಬಿಡ್‌ದಾರರು ಭಾಗವಹಿಸದೆ ಇರುವುದರಿಂದ ಹಾಲಿ ನಿಗದಿಪಡಿಸಿರುವ ಬಾಡಿಗೆ ಮತ್ತು ಠೇವಣಿ ಮೊತ್ತವನ್ನು ಪರಿಷ್ಕರಿಸಿ ನಿಗದಿಗೊಳಿಸಲು ಜಿಲ್ಲಾಧಿಕಾರಿಗಳು, ಹಾಸನ ಇವರು ತಮ್ಮ ಪತ್ರ ಸಂಖ್ಯೆ: ಮುನಿಸಿ(2)/ಸಿ.ಆರ್/383/2019-20, ದಿ:04.07.2020 ರಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಹೊಳೆನರಸೀಪುರ ಪುರಸಭೆಯ ಅಂಗಡಿ ಮಳಿಗೆ ಬಾಡಿಗೆ/ಠೇವಣಿ ಮೊತ್ತವನ್ನು ಕಡಿಮೆ ಮಾಡಲು ಅನುಮೋದನೆ ಕೋರಿ ಜಿಲ್ಲಾಧಿಕಾರಿಗಳು, ಹಾಸನ ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ದಿ:05.11.2020 ರಂದು ಸರ್ಕಾರಕ್ಕೆ ಪೌರಾಡಳಿತ ನಿರ್ದೇಶನಾಲಯದಿಂದ ಸಲ್ಲಿಸಲಾಗಿರುತ್ತದೆ. |
| ಆ) | ಸದರಿ ಪ್ರಸ್ತಾವನೆಯು ಸರ್ಕಾರಕ್ಕೆ ಸಲ್ಲಿಕೆಯಾಗಿ ಸುಮಾರು 7 ತಿಂಗಳಾಗಿದ್ದರೂ ಸಹ ಈವರೆವಿಗೂ ಅನುಮೋದನೆ ನೀಡಲು ವಿಳಂಭವಾಗಲು ಕಾರಣಗಳೇನು; ಹೊಳೇನರಸೀಪುರ ಪುರಸಭಾ ಮಳಿಗೆಗಳಿಗೆ ಬಾಡಿಗೆ ಮತ್ತು ಠೇವಣಿ ಪರಿಷ್ಕರಣೆಯಾಗದಿರುವುದರಿಂದ ಸದರಿ ಮಳಿಗೆಗಳನ್ನು ಹರಾಜು ಮಡಲು ವಿಳಂಬವಾಗುತ್ತಿದ್ದು ಇದರಿಂದಾಗಿ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ನಷ್ಟವನ್ನು ತಪ್ಪಿಸಲು ಮಳಿಗೆಗಳ ಬಾಡಿಗೆ ಮತ್ತು ಠೇವಣಿ ಪರಿಷ್ಕರಣೆ ಮಾಡುವ ಸಂಬಂಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? ಸಂಪೂರ್ಣ ಮಾಹಿತಿ ನೀಡುವುದು. | ಹೊಳೆನರಸೀಪುರ ಪುರಸಭೆಯ ವ್ಯಾಪ್ತಿಯ 139 ವಾಣಿಜ್ಯ ಮಳಿಗೆಗಳ ಹರಾಜಿನಲ್ಲಿ ಯಾರೂ ಬಿಡ್‌ದಾರರು ಭಾಗವಹಿಸಿ ಮಳಿಗೆಗಳನ್ನು ಪಡೆಯದೆ ಇರುವುದರಿಂದ, ದಿನಾಂಕ.21.12.2018 ರಂದು ನಡೆದ ಆಡಳಿತಾಧಿಕಾರಿಗಳ ಸಭೆಯ ತೀರ್ಮಾನದಂತೆ ಸರ್ಕಾರದ ಸುತ್ತೋಲೆಗಳನ್ವಯ ನಿಗಧಿಪಡಿಸಿರುವ ಬಾಡಿಗೆ/ಠೇವಣಿ ದರದಲ್ಲಿ ಶೇ.50ರ ದರಗಳಿಗೆ ಕಡಿಮೆಯಿಲ್ಲದಂತೆ ಸಾರ್ವಜನಿಕ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಅನುಮತಿ ನೀಡುವಂತೆ ಜಿಲ್ಲಾಧಿಕಾರಿಗಳು, ಹಾಸನರವರು ದಿ: 16.01.2019 ರಲ್ಲಿ ಕೋರಿರುತ್ತಾರೆ. ಈ ಬಗ್ಗೆ ಪೌರಾಡಳಿತ ನಿರ್ದೇಶನಲಾಯದ ಪತ್ರ ಸಂಖ್ಯೆ: 26297 ಡಿಎಂಎ 77 ಎಸ್‌ಹೆಚ್‌ಓಪಿ 2018-19 ದಿ: 20.02.2019 ರಲ್ಲಿ ಅನುಮತಿ ನೀಡಲಾಗಿರುತ್ತದೆ.<br>ನಿರ್ದೇಶನಾಲಯದ ಅನುಮೋದನೆ ಪಡೆದು ನಾಲ್ಕು ವಿವಿಧ ದಿನಾಂಕಗಳಂದು ಮಳಿಗೆಗಳನ್ನು ಹರಾಜು ಮಾಡಲಾಗಿರುತ್ತದೆ. 139 ಅಂಗಡಿ ಮಳಿಗೆ ಪೈಕಿ ಹರಾಜಿನಲ್ಲಿ ಯಾರು ಭಾಗವಹಿಸದೆ ಖಾಲಿ ಉಳಿದಿರುವ 76 ಅಂಗಡಿ ಮಳಿಗೆಗಳಿಗೆ ಮಾತ್ರ ಈಗಾಗಲೇ ಶೇ.50 ರಷ್ಟು |

| | | |
|---|---|---|
| | | ಕಡಿತಗೊಳಿಸಿರುವ ಬಾಡಿಗೆ/ಠೇವಣಿ ಮೊತ್ತದಲ್ಲಿ ಪುನಃ ಶೇ.25 ರಷ್ಟು ಬಾಡಿಗೆ ಮತ್ತು ಠೇವಣಿ ಕಡಿಮೆ ಮಾಡಲು ಜಿಲ್ಲಾಧಿಕಾರಿಗಳು, ಹಾಸನ ಇವರು ದಿ:04.07.2020 ರ ಪತ್ರದಲ್ಲಿ ಅನುಮೋದನೆ ಕೋರಿರುತ್ತಾರೆ.<br>ಜಿಲ್ಲಾಧಿಕಾರಿಗಳು, ಹಾಸನ ರವರು ಕೋರಿರುವಂತೆ ಬಾಡಿಗೆ ಕಡಿಮೆ ಮಾಡಲು ಅನುಮತಿ ನೀಡಬಹುದಾಗಿದೆ ಎಂಬ ಅಭಿಪ್ರಾಯದೊಂದಿಗೆ ದಿ:05.11.2020 ರಂದು ಸರ್ಕಾರಕ್ಕೆ ಪೌರಾಡಳಿತ ನಿರ್ದೇಶನಾಲಯದಿಂದ ಸಲ್ಲಿಸಲಾಗಿರುವ ಪ್ರಸ್ತಾವನೆಗೆ ಸರ್ಕಾರದಿಂದ ಅನುಮತಿ ನೀಡಲಾಗಿದೆ. |

ಸಂಖ್ಯೆ: ನಅಇ 15 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



**ಕರ್ನಾಟಕ ಸರ್ಕಾರ**

**ಸಂಖ್ಯೆ:** ನಅಇ 13 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 29.01.2021.

84 u/s
29/01/2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜೇಗೌಡ.ಟಿ.ಡಿ (ಶೃಂಗೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 69ಕ್ಕೆ ಉತ್ತರ ಕಳುಹಿಸುವ ಬಗ್ಗೆ.

~** **~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ರಾಜೇಗೌಡ.ಟಿ.ಡಿ (ಶೃಂಗೇರಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 69ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

**(ಲತಾ.ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ.

29/1



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 69 |
| ಸದಸ್ಯರ ಹೆಸರು : | ಶ್ರೀ ರಾಜೇಗೌಡ.ಟಿ.ಡಿ (ಶೃಂಗೇರಿ) |
| ಉತ್ತರಿಸಬೇಕಾದ ದಿನಾಂಕ : | 29-01-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ಸಮಯದಲ್ಲಿ ವ್ಯಾಪಾರವಿಲ್ಲದೇ ಸಂಕಷ್ಟಕ್ಕೆ ಸಿಲುಕಿದ ಕೊಪ್ಪ ಪಟ್ಟಣ ಪಂಚಾಯಿತ್ತಿ ವ್ಯಾಪ್ತಿಯ ವಾಣಿಜ್ಯ ಮಳಿಗೆಗಳ ಬಾಡಿಗೆದಾರರ 8 ತಿಂಗಳ ಬಾಡಿಗೆ ಮನ್ನಾ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? (ವಿವರ ನೀಡುವುದು) | ಬಂದಿರುವುದಿಲ್ಲ. |
| ಆ) | ಯಾವ ಕಾಲಮಿತಿಯೊಳಗೆ ಬಾಡಿಗೆ ಮನ್ನಾ ಪ್ರಸ್ತಾವನೆಯನ್ನು ಮಾಡಲಾಗುವುದು: | ಉದ್ಭವಿಸುವುದಿಲ್ಲ. |
| ಇ) | ಈಗಾಗಲೇ ವಿವಿಧ ವರ್ಗಗಳಿಗೆ ಪರಿಹಾರ ಘೋಷಿಸಿರುವಂತೆ ಮಳಿಗೆಗಳ ಬಾಡಿಗೆದಾರರಿಗೂ ವಿಶೇಷ ಪ್ಯಾಕೇಜ್ ಮೂಲಕ ಆರ್ಥಿಕ ಬಲ ತುಂಬಲು ಸರ್ಕಾರ ಬದ್ಧವಾಗಿದೆಯೇ? (ವಿವರ ನೀಡುವುದು) | ಉದ್ಭವಿಸುವುದಿಲ್ಲ. |

ಸಂಖ್ಯೆ: ನಅಇ 13 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



**ಕರ್ನಾಟಕ ಸರ್ಕಾರ**

**ಸಂಖ್ಯೆ:** ನಅಇ 02 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 29.01.2021.

112
415
29/1/2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ.ಎಸ್.ಎನ್(ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 45ಕ್ಕೆ ಉತ್ತರ ಕಳುಹಿಸುವ ಬಗ್ಗೆ.

~** **~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಸುಬ್ಬಾರೆಡ್ಡಿ.ಎಸ್.ಎನ್(ಬಾಗೇಪಲ್ಲಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 45ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಲತಾ.ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ.

29/1



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 45 |
| ಸದಸ್ಯರ ಹೆಸರು : | ಶ್ರೀ ಸುಬ್ಬಾರೆಡ್ಡಿ.ಎಸ್.ಎನ್ (ಬಾಗೆಪಲ್ಲಿ) |
| ಉತ್ತರಿಸಬೇಕಾದ ದಿನಾಂಕ : | 29-01-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಾಗೇಪಲ್ಲಿ ಪಟ್ಟಣದ ಸರ್ವೆ ನಂಬರ್ 512 ರಲ್ಲಿ 0-3 1/2 ಗುಂಟೆ ಜಮೀನು ಲಭ್ಯವಿದ್ದು, ಸದರಿ ಜಮೀನಿನ ಪಹಣಿಯನ್ನು 0-37 ಗುಂಟೆ ಜಮೀನು ಎಂದು ತಿದ್ದುಪಡಿ ಮಾಡಿ ನಕಲಿ ಖಾತೆಗಳನ್ನು ತೆರೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಬಂದಿರುತ್ತದೆ |
| ಆ | ಬಂದಿದ್ದಲ್ಲಿ, ಜಮೀನು ಇಲ್ಲದೇ ಇದ್ದರೂ ಪಕ್ಕದಲ್ಲಿನ ಸರ್ಕಾರಿ ಜಮೀನಿಗೆ ಖಾತೆ ತೆರೆದಿರುವುದು ನಿಜವೇ; | ಸರ್ಕಾರಿ ಜಮೀನಿನಲ್ಲಿ ಖಾತೆಯನ್ನು ತೆರೆದಿರುವುದಿಲ್ಲ. |
| ಇ | ಈ ಅಕ್ರಮ ಖಾತೆಗಳನ್ನು ರದ್ದು ಮಾಡಲು ಮತ್ತು ಸರ್ಕಾರಿ ಜಮೀನಿನಲ್ಲಿ ನಿರ್ಮಾಣ ಮಾಡಿರುವ ಕಟ್ಟಡಗಳನ್ನು ತೆರವು ಮಾಡಲು ಕ್ರಮ ಕೈಗೊಳ್ಳಲಾಗುವುದೇ; | ಅಧಿಕೃತ ದಾಖಲೆಗಳಿಲ್ಲದೆ ದಾಖಲಿಸಿರುವ ಖಾತೆಗಳನ್ನು ನಿಯಮಾನುಸಾರ ರದ್ದುಪಡಿಸಲು ಕರ್ನಾಟಕ ಪೌರಸಭೆಗಳ ಅಧಿನಿಯಮ 1964 ಕಲಂ 322 ರಂತೆ ಪುರಸಭೆಗಳ ಪುನರೀಕ್ಷಣೆ ಅಧಿಕಾರವನ್ನು ಸರ್ಕಾರವು ದಿ:09.01.2015ರ ಅಧಿಸೂಚನೆಯಲ್ಲಿ ಜಿಲ್ಲಾಧಿಕಾರಿಗಳಿಗೆ ಪ್ರತ್ಯಾಯೋಜಿಸ ಲಾಗಿರುತ್ತದೆ, ಆದ್ದರಿಂದ ಅನಧಿಕೃತ ಖಾತೆಗಳನ್ನು ರದ್ದುಪಡಿಸಲು ಕ್ರಮವಹಿಸುವಂತೆ ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ರವರಿಗೆ ಪೌರಾಡಳಿತ ನಿರ್ದೇಶನಾಲಯದಿಂದ ನಿರ್ದೇಶನ ನೀಡಲಾಗಿರುತ್ತದೆ. |
| ಈ | ಹಾಗಿದ್ದಲ್ಲಿ, ಯಾವಾಗ ತೆರವು ಮಾಡಲಾಗುವುದು? ವಿವರ ನೀಡುವುದು. | ಸರ್ವೇ ನಂ 512ರಲ್ಲಿ 0.37ಗುಂಟೆ ಜಮೀನಿನಲ್ಲಿ ವಾಸದ ಮನೆಗಳು ನಿರ್ಮಾಣವಾಗಿದ್ದು, ಅಕ್ರಮ ಖಾತೆಗಳನ್ನು ರದ್ದುಪಡಿಸಿದ ನಂತರ ಅನಧಿಕೃತ ಕಟ್ಟಡಗಳನ್ನು ತೆರವುಪಡಿಸಲು ನಿಯಾಮನುಸಾರ ಕ್ರಮಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ 2 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ನಅಇ 16 ಜಿಇಎಲ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 29.01.2021.

59 u/s.
29/01/2021

**ಇವರಿಂದ:**
ಸರ್ಕಾರದ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

**ಮಾನ್ಯರೆ,**

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಂಜುನಾಥ.ಪಿ (ಹುಣಸೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 217ಕ್ಕೆ ಉತ್ತರ ಕಳುಹಿಸುವ ಬಗ್ಗೆ.

~** **~

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಮಂಜುನಾಥ.ಪಿ (ಹುಣಸೂರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 217ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಲತಾ.ಕೆ)
ಸರ್ಕಾರದ ಅಧೀನ ಕಾರ್ಯದರ್ಶಿ,
(ಪೌರಾಡಳಿತ-2 ಮತ್ತು ಮಂಡಳಿ)
ನಗರಾಭಿವೃದ್ಧಿ ಇಲಾಖೆ.

29/1



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 217 |
| ಸದಸ್ಯರ ಹೆಸರು : | ಶ್ರೀ ಮಂಜುನಥ್.ಹೆಚ್.ಪಿ (ಹುಣಸೂರು) |
| ಉತ್ತರಿಸಬೇಕಾದ ದಿನಾಂಕ : | 29-01-2021 |
| ಉತ್ತರಿಸುವವರು : | ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ. |
|---|---|---|
| ಅ) | ಹುಣಸೂರು ನಗರಸಭೆ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಜನರು ತಮ್ಮ ಸ್ವಂತ ಆಸ್ತಿಗಳ ಮೇಲೆ ಬ್ಯಾಂಕುಗಳಲ್ಲಿ ಮತ್ತು ಇತರೆ ಫೈನಾನ್ಸ್ ಕಂಪೆನಿಗಳಿಂದ ಸಾಲ ಪಡೆಯಲು ಎನ್.ಓ.ಸಿ. ನೀಡದೆ ಇರುವುದರಿಂದ ಜನರಿಗೆ ಅನಾನುಕೂಲವಾಗುತ್ತಿದ್ದು, ಈ ಬಗ್ಗೆ ಸರ್ಕಾರವು ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಅಧಿಕೃತ ಆಸ್ತಿಗಳಿಗೆ ಸಂಬಂಧಿಸಿದಂತೆ ನಮೂನೆ-3/ಆಸ್ತಿ ಉದ್ಧೃತ ಪ್ರತಿಯನ್ನು ನಿಯಮಾನುಸಾರ ನೀಡಲಾಗುತ್ತಿದೆ. ಅನಧಿಕೃತ ಬಡಾವಣೆಗಳ ನಿವೇಶನಗಳಿಗೆ ನಮೂನೆ-3 ನೀಡಲು ಪ್ರಸ್ತುತ ಕಾಯ್ದೆ ಮತ್ತು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |
| ಆ) | ಆಸ್ತಿದಾರರು ತಮ್ಮ ಆಸ್ತಿಗಳನ್ನು ಮಾರಾಟ / ಖರೀದಿ ಮಾಡಲು ಖಾತೆ ಬದಲಾವಣೆಗೆ ನಗರಸಭೆ ಅಧಿಕಾರಿಗಳು ವಿಳಂಭ ಧೋರಣೆ ಅನುಸರಿಸುತ್ತಿರುವುದರಿಂದ ಆಸ್ತಿದಾರರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಧಿಕೃತ ಆಸ್ತಿಗಳ ಹಕ್ಕು ವರ್ಗಾವಣೆಗೆ ನಿಗಧಿತ ಅವಧಿಯೊಳಗೆ ಕ್ರಮವಹಿಸಲಾಗುತ್ತಿದೆ. |
| ಇ) | ಬಂದಿದ್ದಲ್ಲಿ, ಹುಣಸೂರು ನಗರಸಭಾ ವ್ಯಾಪ್ತಿಯಲ್ಲಿ ಆಸ್ತಿ ಹೊಂದಿರುವ ಜನತೆಗೆ ಅನುಕೂಲ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಅನಧಿಕೃತ ಆಸ್ತಿಗಳ ಹಕ್ಕು ವರ್ಗಾವಣೆಗೆ ಪ್ರಸ್ತುತ ಕಾಯ್ದೆ / ನಿಯಮಗಳಲ್ಲಿ ಅವಕಾಶವಿರುವುದಿಲ್ಲ. |

ಸಂಖ್ಯೆ: ನಅಇ 16 ಜಿಇಎಲ್ 2021

(ಎನ್.ನಾಗರಾಜ್ ಎಂಟಿಬಿ)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

ಕರ್ನಾಟಕಸರ್ಕಾರ

ಸಂಖ್ಯೆ: HORTI 32 HGM 2021

ಕರ್ನಾಟಕಸರ್ಕಾರದಸಚಿವಾಲಯ
ಬಹುಮಹಡಿಗಳ ಕಟ್ಟಡ
ಬೆಂಗಳೂರು, ದಿ: 28-01-2021

ಇವರಿಂದ:
ಸರ್ಕಾರದ ಪ್ರಧಾನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ

ಇವರಿಗೆ:
ಕಾರ್ಯದರ್ಶಿಯವರು
ಕರ್ನಾಟಕ ವಿಧಾನಸಭಾ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

19
u/s
29/01/2021

ಮಾನ್ಯರೇ,

ವಿಷಯ :ಶ್ರೀ ಬೆಳ್ಳಿಪ್ರಕಾಶ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:198ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಬೆಳ್ಳಿಪ್ರಕಾಶ, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:198ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮನಂಬುಗೆಯ

T.V. Sunandamma 28/01/2021
(ಟಿ.ವಿ.ಸುನಂದಮ್ಮ)
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ
28/1

<u>ಕರ್ನಾಟಕ ವಿಧಾನ ಸಭೆ</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ : 198

ಸದಸ್ಯರ ಹೆಸರು : ಶ್ರೀ. ಬೆಳ್ಳಿಪ್ರಕಾಶ್

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 29.01.2021

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಚಿಕ್ಕಮಗಳೂರು ಜಿಲ್ಲೆ ಕಡೂರು ಕ್ಷೇತ್ರಕ್ಕೆ ಕಳೆದ 2 ವರ್ಷಗಳಿಂದ ರೈತರಿಗೆ ತೋಟಗಾರಿಕೆ ಇಲಾಖೆಯಿಂದ ಕೇಂದ್ರ ಹಾಗೂ ರಾಜ್ಯದ ವಿವಿಧ ಯೋಜನೆಗಳಲ್ಲಿ ಬಿಡುಗಡೆ ಮಾಡಲಾದ ಅನುದಾನವೆಷ್ಟು; (ಯೋಜನಾವಾರು ವಿವರ ನೀಡುವುದು)</td><td>ಚಿಕ್ಕಮಗಳೂರು ಜಿಲ್ಲೆಯ ಕಡೂರು ಕ್ಷೇತ್ರದ ರೈತರಿಗೆ ಕಳೆದ 2 ವರ್ಷಗಳಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಕೇಂದ್ರ ಹಾಗೂ ರಾಜ್ಯ ವಲಯ ಯೋಜನೆಗಳಡಿಯಲ್ಲಿ ಬಿಡುಗಡೆಯಾದ ಅನುದಾನದ ವಿವರ ಈ ಕೆಳಗಿನಂತಿದೆ;<br><table><tr><th>ಕ್ರ. ಸಂ.</th><th>ವರ್ಷ</th><th>ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ)</th></tr><tr><td>1.</td><td>2018-19</td><td>2112.54</td></tr><tr><td>2.</td><td>2019-20</td><td>1008.88</td></tr></table>ಯೋಜನಾವಾರು ಬಿಡುಗಡೆಯಾದ ಅನುದಾನದ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ.</td></tr>
<tr><td>ಆ)</td><td>ಕಡೂರು ಕ್ಷೇತ್ರದ ವ್ಯಾಪ್ತಿಯಲ್ಲಿ ತೋಟಗಾರಿಕೆ ಬೆಳೆಗಳಾದ ಅಡಿಕೆ, ಈರುಳ್ಳಿ ಮತ್ತು ದಾಳಿಂಬೆ ಬೆಳೆಗಳ ಶೇಕರಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಘಟಕಗಳ ನಿರ್ಮಾಣಕ್ಕೆ ಬಿಡುಗಡೆಯಾದ ಅನುದಾನವೆಷ್ಟು; (ವಿವರ ನೀಡುವುದು)</td><td>ಕಡೂರು ಕ್ಷೇತ್ರದ ವಾಪ್ತಿಯಲ್ಲಿ ತೊಟಗಾರಿಕೆ ಬೆಳೆಗಳಾದ ಅಡಿಕೆ, ಈರುಳ್ಳಿ ಮತ್ತು ದಾಳಿಂಬೆ ಬೆಳೆಗಳಿಗೆ ಸಂಬಂಧಿಸಿದಂತೆ ಶೇಖರಣೆ ಹಾಗೂ ಸಂಸ್ಕರಣೆಗಾಗಿ 2020-21 ನೇ ಸಾಲಿನಲ್ಲಿ ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಈ ಕೆಳಕಂಡಂತೆ ಗುರಿಗಳನ್ನು ನಿಗದಿಪಡಿಸಲಾಗಿರುತ್ತದೆ:<br>1) ಈರುಳ್ಳಿ ಶೇಖರಣಾ ಘಟಕ: 105 ಘಟಕಗಳ ಭೌತಿಕ ಗುರಿ, ರೂ.91.80 ಲಕ್ಷಗಳ ಆರ್ಥಿಕ ಗುರಿಯನ್ನು ನಿಗಧಿಪಡಿಸಲಾಗಿದ್ದು, ಈಗಾಗಲೆ 57 ಘಟಕಗಳಿಗೆ ರೂ.36.31 ಲಕ್ಷಗಳ ಸಹಾಯಧನ ವಿತರಿಸಲಾಗಿದೆ ಉಳಿಕೆ ಘಟಕಗಳ ಕಾಮಗಾರಿ ಪ್ರಗತಿಯಲ್ಲಿರುತ್ತದೆ. ಕಾಮಗಾರಿ ಪೂರ್ಣಗೊಂಡ ನಂತರ ಸಹಾಯಧನ ವಿತರಿಸಲಾಗುವುದು.<br>2) ಅಡಿಕೆ ಸಂಸ್ಕರಣೆ: 3 ಘಟಕದ ಭೌತಿಕ ಗುರಿ ಇದ್ದು, ಕಾಮಗಾರಿ ಪೂರ್ಣಗೊಂಡಿದ್ದು, ರೂ.29.71 ಲಕ್ಷಗಳ ಸಹಾಯಧನ ವಿತರಿಸಲಾಗಿದೆ.<br>3) ದಾಳಿಂಬೆ ಶೇಖರಣೆಗೆ 2020-21ನೇ ಸಾಲಿನಲ್ಲಿ ಯಾವುದೇ ಅನುದಾನ ನಿಗದಿಯಾಗಿರುವುದಿಲ್ಲ.</td></tr>
</table>

<table>
<tr>
<td>ಇ)</td>
<td>ಕಡೂರು ಕ್ಷೇತ್ರಕ್ಕೆ ಕಳೆದ 2 ವರ್ಷಗಳಿಂದ ಹನಿ ನೀರಾವರಿ ಯೋಜನೆಯಲ್ಲಿ ಒದಗಿಸಿರುವ ಅನುದಾನವೆಷ್ಟು; ಫಲಾನುಭವಿ ರೈತರ ಹೋಬಳಿವಾರು ಮಾಹಿತಿ ನೀಡುವುದು;</td>
<td>ಕಡೂರು ಕ್ಷೇತ್ರಕ್ಕೆ ಕಳೆದ ಎರಡು ವರ್ಷಗಳಿಂದ ಅಂದರೆ, 2018-19 ಹಾಗೂ 2019-20ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯಡಿ ಹನಿ ನೀರಾವರಿ ಯೋಜನೆಯಲ್ಲಿ ಒದಗಿಸಿರುವ ಅನುದಾನ ಒಟ್ಟು ರೂ.846.56 ಲಕ್ಷಗಳಾಗಿರುತ್ತದೆ. ವಿವರ ಕೆಳಕಂಡಂತಿದೆ;
<table>
<tr><th>ಕ್ರ. ಸಂ.</th><th>ವರ್ಷ</th><th>ಒದಗಿಸಲಾದ ಅನುದಾನದ ವಿವರ (ರೂ.ಲಕ್ಷಗಳಲ್ಲಿ)</th></tr>
<tr><td>1.</td><td>2018-19</td><td>284.58</td></tr>
<tr><td>2.</td><td>2019-20</td><td>561.98</td></tr>
<tr><td colspan="2">ಒಟ್ಟು</td><td>846.56</td></tr>
</table>
ಫಲಾನುಭವಿ ರೈತರ ಹೋಬಳಿವಾರು ಮಾಹಿತಿಯನ್ನು ಅನುಬಂಧ-2ರಲ್ಲಿ ಸಿ.ಡಿ ಯಲ್ಲಿ ಒದಗಿಸಿದೆ.</td>
</tr>
<tr>
<td>ಈ)</td>
<td>ಹನಿ ನೀರಾವರಿ ಯೋಜನೆ ಸಾಧನಗಳ ಅಳವಡಿಕೆ ಮತ್ತು ಬಳಕೆ ಅವಧಿ ಬಗ್ಗೆ ಸರ್ಕಾರ ನಿಗಧಿಪಡಿಸಿರುವ ಮಾನದಂಡವೇನು; (ಮಾಹಿತಿ ನೀಡುವುದು)</td>
<td>ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ, ಹನಿ ನೀರಾವರಿ ಯೋಜನೆಯಡಿ ಫಲಾನುಭವಿಗಳು ಇಲಾಖಾ ಅನುಮೋದಿತ ಕಂಪನಿಗಳಿಂದ ಪದ್ಧತಿಯನ್ನು ಅಳವಡಿಸಿಕೊಳ್ಳಬೇಕಾಗಿರುತ್ತದೆ. ತಾಕಿನಲ್ಲಿ ಹನಿ ನೀರಾವರಿ ಪದ್ಧತಿಯನ್ನು ಆಯಾ ಬೆಳೆಗೆ ಅಗತ್ಯವಿರುವ ನೀರಿನ ಪ್ರಮಾಣ, ಲಭ್ಯವಿರುವ ನೀರಿನ ಹಾಗೂ ವಿದ್ಯುಚ್ಛಕ್ತಿಗಳ ಮೂಲ, ತಾಕುವಿನ ವಿಸ್ತೀರ್ಣ, ಆಕಾರ, ಬೆಳೆ, ಮಣ್ಣು ಹಾಗೂ ನೀರಿನ ಗುಣಮಟ್ಟವನ್ನು ಆಧರಿಸಿ Bureau of Indian Standards (BIS) ಗುಣಮಟ್ಟವುಳ್ಳ ಸಾಧನಗಳನ್ನು ಅಳವಡಿಸಲಾಗುತ್ತದೆ. ಹನಿ ನೀರಾವರಿ ಸಾಧನ/ಉಪಕರಣಗಳಾದ PVC Pipe, Filters, laterals, Emitting Pipe, Ventury, Emitters ಹಾಗೂ ತುಂತುರು ನೀರಾವರಿ ಸಾಧನ/ಉಪಕರಣಗಳಾದ Coupled HDPE Pipe, Sprinkler Nozzles, GI riser Pipe ಇತ್ಯಾದಿಗಳನ್ನು ಅಳವಡಿಸಲಾಗುತ್ತದೆ. ಅಳವಡಿಸಲಾದ ಪದ್ಧತಿಯನ್ನು ಫಲಾನುಭವಿಯ ಬೇಡಿಕೆ ಅನುಸಾರ 5 ವರ್ಷಗಳ ಕಾಲ ಸಂಬಂಧಪಟ್ಟ ಕಂಪನಿಗಳು ನಿರ್ವಹಣೆ ಮಾಡಬೇಕಾಗಿರುತ್ತದೆ. ತದನಂತರ, ಕಂಪನಿಗಳು ನೀಡಿದ ತರಬೇತಿಯನ್ವಯ ಫಲಾನುಭವಿಗಳು ಘಟಕ ನಿರ್ವಹಣೆಯನ್ನು ಮಾಡಬೇಕಾಗಿರುತ್ತದೆ.</td>
</tr>
</table>

| | | |
|---|---|---|
| ಉ) | ಕಡೂರು ಕ್ಷೇತ್ರಕ್ಕೆ ಕಳೆದ 2 ವರ್ಷಗಳಿಂದ ಇಲ್ಲಿಯವರೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಕೃಷಿ ಯಾಂತ್ರೀಕರಣ ಯೋಜನೆಯಡಿಯಲ್ಲಿ ಒದಗಿಸಲಾದ ಅನುದಾನವೆಷ್ಟು? (ಹೋಬಳಿವಾರು ಫಲಾನುಭವಿ ರೈತರ ಮಾಹಿತಿ ನೀಡುವುದು) | ಕಡೂರು ಕ್ಷೇತ್ರಕ್ಕೆ ಕಳೆದ 2 ವರ್ಷಗಳಿಂದ ಇಲ್ಲಿಯವರೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಕೃಷಿ ಯಾಂತ್ರೀಕರಣ ಯೋಜನೆಯಡಿಯಲ್ಲಿ ಒದಗಿಸಲಾದ ಅನುದಾನದ ವಿವರ ಈ ಕೆಳಕಂಡಂತಿದೆ ಹಾಗೂ ಹೋಬಳಿವಾರು ಫಲಾನುಭವಿ ರೈತರ ಮಾಹಿತಿಯನ್ನು ಅನುಬಂಧ-3ರಲ್ಲಿ ಸಿ.ಡಿ ಯಲ್ಲಿ ಒದಗಿಸಲಾಗಿದೆ. |

| ಕ್ರ ಸಂ | ಯೋಜನೆಯ ಹೆಸರು | ಬಿಡುಗಡೆ (ರೂ ಲಕ್ಷಗಳಲ್ಲಿ) | | |
|---|---|---|---|---|
| | | 2018-19 | 2019-20 | 2020-21 (ಇಲ್ಲಿಯವರೆಗೆ) |
| 1 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 6.75 | 2.00 | 18.00 |
| 2 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 0.70 | 0.00 | 32.00 |
| 3 | ಕೃಷಿ ಯಾಂತ್ರೀಕರಣ ಉಪ ಅಭಿಯಾನ (SMAM) | 21.08 | 39.21 | 0.00 |

ಸಂಖ್ಯೆ:HORTI 32 HGM 2021

(ಆರ್.ಶಂಕರ್)
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

LAQ-198

ಅನುಬಂಧ-1

**ಚಿಕ್ಕಮಗಳೂರು ಜಿಲ್ಲೆ ಕಡೂರು ಕ್ಷೇತ್ರಕ್ಕೆ ಕಳೆದ ಎರಡು ವರ್ಷಗಳಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿಯಲ್ಲಿ ಬಿಡುಗಡೆ ಮಾಡಲಾದ ಅನುದಾನದ ವಿವರ**

| ಕ್ರ.ಸಂ. | ಯೋಜನೆ | ಬಿಡುಗಡೆಯಾದ ಅನುದಾನ (ರೂ. ಲಕ್ಷಗಳಲ್ಲಿ) | |
|---|---|---|---|
| | | 2018-19 | 2019-20 |
| I | ಕೇಂದ್ರುವಲಯ ಯೋಜನೆಗಳು | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) | 259.79 | 552.02 |
| 2 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ | 1382.35 | 71.47 |
| 3 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 141.76 | 178.47 |
| 4 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 25.00 | 2.00 |
| 5 | ಕೃಷಿ ಯಾಂತ್ರೀಕರಣ ಅಭಿಯಾನ (SMAM) | 0.00 | 39.21 |
| | ಒಟ್ಟು | 1808.90 | 843.17 |
| II | ರಾಜ್ಯ ವಲಯ ಯೋಜನೆಗಳು | | |
| 6 | ಸಮಗ್ರ ತೋಟಗಾರಿಕಾ ಅಭಿವೃದ್ಧಿ ಯೋಜನೆ | 108.93 | 102.95 |
| 7 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ, | 5.60 | 1.57 |
| 8 | ಕೃಷಿ ಭಾಗ್ಯ ಯೋಜನೆ | 125.31 | 50.69 |
| 9 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | 13.80 | 9.00 |
| 10 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ | 0.00 | 1.50 |
| 11 | RIDF-Micro Irrigation | 50.00 | 0.00 |
| | ಒಟ್ಟು | 303.64 | 165.71 |
| | ಒಟ್ಟಾರೆ | 2112.54 | 1008.88 |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

ಕರ್ನಾಟಕಸರ್ಕಾರ

ಸಂಖ್ಯೆ: HORTI 24 HGM 2021

ಕರ್ನಾಟಕಸರ್ಕಾರದಸಚಿವಾಲಯ

ಬಹುಮಹಡಿಗಳ ಕಟ್ಟಡ

ಬೆಂಗಳೂರು, ದಿ: 28-01-2021

012 u/s 29/01/2021

ಇವರಿಂದ:

ಸರ್ಕಾರದ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

ಇವರಿಗೆ:

ಕಾರ್ಯದರ್ಶಿಯವರು

ಕರ್ನಾಟಕ ವಿಧಾನಸಭಾ ಸಚಿವಾಲಯ,

ವಿಧಾನಸೌಧ, ಬೆಂಗಳೂರು.

ಮಾನ್ಯರೇ,

ವಿಷಯ :ಶ್ರೀ ಅನಿಲ್ ಚಿಕ್ಕಮಾದು, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:98ರ ಬಗ್ಗೆ.

****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಅನಿಲ್ ಚಿಕ್ಕಮಾದು, ವಿಸಸ, ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ:98ಕ್ಕೆ ಉತ್ತರದ 10 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

T.V. Sunandamma 28/01/2021

(ಟಿ.ವಿ.ಸುನಂದಮ್ಮ)

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

28/1

<u>ಕರ್ನಾಟಕ ವಿಧಾನ ಸಭೆ</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ : 98

ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 29.01.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ರಾಜ್ಯದ ತೋಟಗಾರಿಕೆ ಇಲಾಖೆಯಲ್ಲಿ ಜಾರಿಯಲ್ಲಿರುವ ಯೋಜನೆಗಳಿಗೆ ಕೇಂದ್ರ ವಲಯ, ರಾಜ್ಯ ವಲಯ ಹಾಗೂ ಇತರೆ ವಲಯಗಳಡಿ ವಿವಿಧ ಲೆಕ್ಕಶೀರ್ಷಿಕೆಗಳಲ್ಲಿ ಮಂಜೂರಾದ ಅನುದಾನವೆಷ್ಟು; (ಆರ್ಥಿಕ ಹಾಗೂ ಭೌತಿಕ ಪ್ರಗತಿಯ ವರದಿಯೊಂದಿಗೆ ಫಲಾನುಭವಿಗಳ ವಿವರಗಳೊಂದಿಗೆ ಯೋಜನೆವಾರು ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ತೋಟಗಾರಿಕೆ ಇಲಾಖೆಯ ಕೇಂದ್ರ ವಲಯ, ರಾಜ್ಯವಲಯ ಹಾಗೂ ಜಿಲ್ಲಾ ವಲಯ ಯೋಜನೆಗಳ ವಿವಿಧ ಲೆಕ್ಕಶೀರ್ಷಿಕೆಗಳಡಿಯಲ್ಲಿ ಕಳೆದ 03 ವರ್ಷಗಳಲ್ಲಿ ಮಂಜೂರಾದ ಒಟ್ಟಾರೆ ಅನುದಾನದ ವಿವರ ಈ ಕೆಳಗಿನಂತಿದೆ;<br><table><tr><th>ಕ್ರ.ಸಂ.</th><th>ವರ್ಷ</th><th>ಮಂಜೂರಾದ ಅನುದಾನ (ರೂ.ಲಕ್ಷಗಳಲ್ಲಿ)</th></tr><tr><td>1</td><td>2017-18</td><td>93861.38</td></tr><tr><td>2</td><td>2018-19</td><td>113348.92</td></tr><tr><td>3</td><td>2019-20</td><td>87039.50</td></tr><tr><td colspan="2">ಒಟ್ಟು</td><td>294249.80</td></tr></table>ವರ್ಷವಾರು, ಯೋಜನಾವಾರು ಆರ್ಥಿಕ ಹಾಗೂ ಭೌತಿಕ ಪ್ರಗತಿಯ ವಿವರವನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. ಹಾಗೂ ಫಲಾನುಭವಿಗಳ ವಿವರವನ್ನು ಸಿ.ಡಿ. ಯಲ್ಲಿ ಒದಗಿಸಿದೆ. |
| ಆ) | ಮೈಸೂರು ಜಿಲ್ಲೆಯ ತೋಟಗಾರಿಕೆ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ತೋಟಗಾರಿಕೆ ಕ್ಷೇತ್ರಗಳು/ನರ್ಸರಿಗಳು ಯಾವುವು; ಸದರಿ ಕ್ಷೇತ್ರಗಳ/ನರ್ಸರಿಗಳ ಅಭಿವೃದ್ಧಿ, ನಿರ್ವಹಣೆ ಹಾಗೂ ವಿವಿಧ ಕಾರ್ಯ ಚಟುವಟಿಕೆಗಳಿಗಾಗಿ ಬಿಡುಗಡೆಯಾದ ಅನುದಾನವೆಷ್ಟು; (ಕ್ಷೇತ್ರವಾರು, ವಾರ್ಷಿಕವಾರು, ಲೆಕ್ಕಶೀರ್ಷಿಕೆವಾರು ಸಂಪೂರ್ಣ ವಿವರ ನೀಡುವುದು) | ಮೈಸೂರು ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖಾ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿವಿಧ ತೋಟಗಾರಿಕಾ ಕ್ಷೇತ್ರಗಳು / ನರ್ಸರಿಗಳು ಹಾಗೂ ಸದರಿ ಕ್ಷೇತ್ರಗಳ/ ನರ್ಸರಿಗಳ ಅಭಿವೃದ್ಧಿ, ನಿರ್ವಹಣೆ ಹಾಗೂ ವಿವಿಧ ಕಾರ್ಯ ಚಟುವಟಿಕೆಗಳಿಗಾಗಿ ಕಳೆದ ಮೂರು ವರ್ಷಗಳಲ್ಲಿ ಅಂದರೆ, 2017-18, 2018-19 ಮತ್ತು 2019-20ನೇ ಸಾಲಿನಲ್ಲಿ ವಿವಿಧ ಲೆಕ್ಕ ಶೀರ್ಷಿಕೆಗಳಡಿಯಲ್ಲಿ ಬಿಡುಗಡೆಗೊಂಡ ಅನುದಾನದ ವಿವರವನ್ನು ಅನುಬಂಧ-2 ರಲ್ಲಿ ಒದಗಿಸಿದೆ. |
| ಇ) | ತೋಟಗಾರಿಕೆ ಕ್ಷೇತ್ರಗಳಿಗೆ ಕಳೆದ 3 ವರ್ಷಗಳಲ್ಲಿ ಬಿಡುಗಡೆಗೊಂಡ ಅನುದಾನಕ್ಕೆ ಕೈಗೊಂಡ ಕಾರ್ಯಕ್ರಮಗಳಾವುವು; ಸದರಿ ಕಾರ್ಯಕ್ರಮಗಳನ್ನು ಯಾವ ಏಜೆನ್ಸಿಯ | ಸದರಿ ತೋಟಗಾರಿಕೆ ಕ್ಷೇತ್ರಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಸಸ್ಯಾಭಿವೃದ್ಧಿ, ಮೂಲಭೂತ ಸೌಕರ್ಯ ಮತ್ತು ಕ್ಷೇತ್ರ ನಿರ್ವಹಣೆ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗಿದೆ ಹಾಗೂ ಏಜೆನ್ಸಿಯ ಮುಖಾಂತರ |

| | | |
|---|---|---|
| | ಮುಖಾಂತರ ಕೈಗೊಳ್ಳಲಾಗಿದೆ? (ವಿವರ ನೀಡುವುದು) | ಕೈಗೊಳ್ಳಲಾಗಿರುವ ಕಾರ್ಯಕ್ರಮಗಳ ವಿವರವನ್ನು ಅನುಬಂಧ-3ರಲ್ಲಿ ಒದಗಿಸಿದೆ. |

ಸಂಖ್ಯೆ:HORTI 24 HGM 2021

(ಆರ್.ಶಂಕರ್)

ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

LAQ-98

# ಅನುಬಂಧ-1

## 2017-18ನೇ ಸಾಲಿನಿಂದ 2019-20 ನೇ ಸಾಲಿನವರೆಗೆ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಿಗೆ ವಿವಿಧ ಲೆಕ್ಕಶೀರ್ಷಿಕೆಗಳಡಿಯಲ್ಲಿ ಮಂಜೂರಾದ ಅನುದಾನದ ವಿವರಗಳು.

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಯೋಜನೆ ಹೆಸರು | 2017-18 | | | | | 2018-19 | | | | | 2019-20 | | | | |
|---|---|---|---|---|---|---|---|---|---|---|---|---|---|---|---|---|---|
| | | | ಆರ್ಥಿಕ ಸಾಧನೆ | | ಭೌತಿಕ ಸಾಧನೆ | | | ಆರ್ಥಿಕ ಸಾಧನೆ | | ಭೌತಿಕ ಸಾಧನೆ | | | ಆರ್ಥಿಕ ಸಾಧನೆ | | ಭೌತಿಕ ಸಾಧನೆ | | |
| | | | ಬಿಡುಗಡೆ | ಸಾಧನೆ | ಹೆಕ್ಟೇರ್ | ಸಂಖ್ಯೆ | ಮೆ.ಟನ್ | ಬಿಡುಗಡೆ | ಸಾಧನೆ | ಹೆಕ್ಟೇರ್ | ಸಂಖ್ಯೆ | ಮೆ.ಟನ್ | ಬಿಡುಗಡೆ | ಸಾಧನೆ | ಹೆಕ್ಟೇರ್ | ಸಂಖ್ಯೆ | ಮೆ.ಟನ್ |
| I | ಕೇಂದ್ರ ನೆರವಿನ ಯೋಜನೆಗಳು | | | | | | | | | | | | | | | | |
| 1 | 2401-00-108-2-18 | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ | 810.67 | 812.62 | 540.56 | 8 | 338.18 | 888.12 | 736.32 | 4170.00 | 1041 | 351.00 | 1053.48 | 1014.1151 | 5001.04 | | 85 |
| 2 | 2401-00-108-2-30 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) | 28908.87 | 28846.65 | 37819.46 | | | 38229.42 | 36438.57 | 56414.95 | | | 33861.7 | 33713.73 | 48830.95 | | |
| 3 | 2401-00-108-2-51 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ | 2107.85 | 2094.57 | 10.00 | 10 | | 15300.00 | 14908.34 | 12493.57 | 2987682 | | 1596.35 | 1573.924 | 5784.97 | | |
| 4 | 2401-00-800-1-57 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 3614.00 | 3220.21 | | | | - | - | | | | - | - | | | |
| 5 | 2401-00-119-4-12 | ರಾಷ್ಟ್ರೀಯ ಆಯುಷ್ ಮಿಷನ್ | 25.00 | 24.27 | 528.19 | | | - | - | | | | - | - | | | |
| 6 | 2401-00-119-4-06 | ರಾಷ್ಟ್ರೀಯ ತೋಟಗಾರಿಕೆ ಮಿಷನ್, | 11743.98 | 11621.38 | 35980.12 | 10378 | | 18305.56 | 17591.26 | 53077.02 | 16052 | | 18351.24 | 16980.789 | 58089.62 | 12499 | |
| | | ಉಪ ಮೊತ್ತ | 47210.37 | 46619.70 | 74878.33 | 10396 | 338.18 | 72723.10 | 69674.49 | 126155.54 | 3004775 | 351.00 | 54862.77 | 53282.58 | 117706.59 | 12499 | 85.00 |
| II | ರಾಜ್ಯವಲಯ ಯೋಜನೆಗಳು | | | | | | | | | | | | | | | | |
| 1 | 2401-00-001-2-10 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | 1420.00 | 1393.34 | | 2136 | | 279.00 | 275.70 | | | | 328.96 | 327.19 | | | |
| 2 | 2401-00-108-2-52 | ತೋಟಗಾರಿಕೆ ನಿಗಮ ಮತ್ತು ಮಂಡಳಿಗಳಿಗೆ ಸಹಾಯಧನ, | 1556.00 | 1556.00 | 1100.00 | 29296 | | 1000.00 | 1000.00 | | | | 1000.00 | 1000.00 | | | |
| 3 | 2401-00-111-0-08 | ಸಮಗ್ರ ತೋಟಗಾರಿಕಾ ಅಭಿವೃದ್ಧಿ, | 13606.57 | 13428.54 | 19259.33 | 23070 | | 16500.00 | 16152.11 | 13524.28 | 13631 | | 12970.00 | 12790.64 | 32006.97 | 8952 | |
| 4 | 2401-00-119-4-05 | ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ | 1300.00 | 1296.30 | 1094.20 | 881192 | | 1300.00 | 1298.52 | 433.61 | 373780 | | 1300.00 | 1298.37 | 154.34 | 172 | |
| 5 | 2401-00-119-5-01 | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | 1100.00 | 1118.63 | | 1909 | | 659.00 | 670.45 | | 1739 | | 711.30 | 688.49 | | 1904 | |
| 6 | 2401-00-119-5-02 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | 350.00 | 336.43 | 5718.17 | | | 1661.95 | 1643.79 | 3432.70 | 14245 | | 1237.91 | 1227.78 | 10574.31 | | |
| 7 | 2401-00-119-6-03 | ತೋಟಗಾರಿಕೆ ಕಟ್ಟಡಗಳು | 400.00 | 399.85 | | | | 400.00 | 399.98 | | 17 | | 1000.00 | 1000.00 | | 10 | |
| 8 | 2401-00-800-2-48 | ಕೃಷಿ ಭಾಗ್ಯ (ತೋಟಗಾರಿಕೆ) | 12900.00 | 12673.07 | 1158.73 | 587 | | 7867.00 | 7763.52 | 449.80 | 66790 | | 6000.00 | 5911.34 | 295.17 | 461 | |
| 9 | 2401-00-800-2-80 | ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ -II (ಸುಜಲಾ-III) -ಇಎಪಿ, | 2200.00 | 1902.08 | 2100.00 | 15 | | 2980.00 | 2848.81 | 1594.00 | 165 | | 1307.22 | 1257.74 | | | |
| 10 | 2406-02-112-0-17 | ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು, | 4886.34 | 4883.38 | | 286 | | 3050.00 | 3047.83 | | 144 | | 2200.00 | 2123.64 | | 284 | |
| 11 | 2851-00-200-0-01 | ಮಧುವನ ಮತ್ತು ಜೇನು ಸಾಕಾಣಿಕೆ ಅಭಿವೃದ್ಧಿ | 200.00 | 197.69 | | 4855 | | 200.00 | 194.45 | | 5396 | | 700.00 | 691.24 | | 16350 | |
| 12 | 4401-00-800-1-07 | ಕೀಟನಾಶಕ ಶೇಷ ವಿಶ್ಲೇಷಣೆ ಪ್ರಯೋಗಾಲಯ-ನಬಾರ್ಡ, | 654.62 | 654.62 | | | | 50.00 | 50.00 | | | | 0.00 | 0.00 | | | |
| 13 | 4401-00-800-1-08 | Micro Irrigation, RIDF-XXI. ಪ | 1160.00 | 1159.00 | 2211.11 | | | 448.00 | 447.34 | 707.70 | | | 153.00 | 150.65 | 200.77 | | |
| 14 | 4401-00-800-2-00-0 | ಬಾಗಲಕೋಟೆಯಲ್ಲಿ ತೋಟಗಾರಿಕಾ ವಿಶ್ವವಿದ್ಯಾಲಯ, | 200.00 | 200.00 | | 26 | | 390.00 | 390.00 | | | | | | | | |
| 15 | 4401-00-800-2-00-4 | Infrastructure for UHS Bagalakot. RIDF-XXI. | 1000.00 | 1000.00 | | 5 | | 761.00 | 761.00 | | | | 165.99 | 165.99 | | | |
| 16 | 4401-00-108-0-02 | ಕಾರವಾರ,ತುಮಕೂರು,ಯಾದಗಿರಿ ಹಾಗೂ ಧಾರವಾಡ ಜಿಲ್ಲೆಗಳಲ್ಲಿ ಇಸ್ರೇಲ್ ಮಾದರಿಯ ತೋಟಗಾರಿಕೆ ತಾಂತ್ರಿಕತೆ ಗುಚ್ಛಗಳ ಅಭಿವೃದ್ಧಿ | - | - | | | | - | - | | | | 0.00 | 0.00 | | | |
| 17 | 2401-00-108-2-03 | ತೋಟಗಾರಿಕೆ ಮಾರುಕಟ್ಟೆ ಇಂಟಲಿಜೆನ್ಸ್ ಘಟಕ | - | - | | | | - | - | | | | 0.00 | 0.00 | | | |

ಅನುಬಂಧ-1

**2017-18ನೇ ಸಾಲಿನಿಂದ 2019-20 ನೇ ಸಾಲಿನವರೆಗೆ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಿಗೆ ವಿವಿಧ ಲೆಕ್ಕಶೀರ್ಷಿಕೆಗಳಡಿಯಲ್ಲಿ ಮಂಜೂರಾದ ಅನುದಾನದ ವಿವರಗಳು.**

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಯೋಜನೆ ಹೆಸರು | 2017-18 | | | | | 2018-19 | | | | | 2019-20 | | | | |
|---|---|---|---|---|---|---|---|---|---|---|---|---|---|---|---|---|---|
| | | | ಆರ್ಥಿಕ ಸಾಧನೆ | | ಭೌತಿಕ ಸಾಧನೆ | | | ಆರ್ಥಿಕ ಸಾಧನೆ | | ಭೌತಿಕ ಸಾಧನೆ | | | ಆರ್ಥಿಕ ಸಾಧನೆ | | ಭೌತಿಕ ಸಾಧನೆ | | |
| | | | ಬಿಡುಗಡೆ | ಸಾಧನೆ | ಹೆಕ್ಟೇರ್ | ಸಂಖ್ಯೆ | ಮೆ.ಟನ್ | ಬಿಡುಗಡೆ | ಸಾಧನೆ | ಹೆಕ್ಟೇರ್ | ಸಂಖ್ಯೆ | ಮೆ.ಟನ್ | ಬಿಡುಗಡೆ | ಸಾಧನೆ | ಹೆಕ್ಟೇರ್ | ಸಂಖ್ಯೆ | ಮೆ.ಟನ್ |
| 18 | 2401-00-119-1-05 | ಹಣ್ಣು ಮತ್ತು ತರಕಾರಿ ಅಭಿವೃದ್ಧಿ | - | - | | | | - | - | | | | 0.00 | 0.00 | | | |
| 19 | 2401-00-108-2-53 | ಸಾಂಬಾರು ಪದಾರ್ಥಗಳ ಅಭಿವೃದ್ಧಿ ಮಂಡಳಿ | 300.00 | 300.00 | | 975 | | - | - | | | | - | - | | | |
| 20 | 2401-00-108-2-54 | ತೆಂಗು ಉತ್ಪನ್ನ ಉದ್ಯಾನಗಳು | 0.75 | 0.50 | | 74 | | - | - | | | | - | - | | | |
| 21 | 2401-00-108-2-56 | ದ್ರಾಕ್ಷರಸ ನೀತಿ | 500.00 | 500.00 | | | | - | - | | | | - | - | | | |
| | | **ಉಪ ಮೊತ್ತ** | **43734.28** | **42999.43** | **32641.54** | **944426** | **0.00** | **37545.95** | **36943.49** | **20142.09** | **475907** | **0.00** | **29074.38** | **28633.06** | **43231.56** | **28133** | **0.00** |
| III | **ಜಿಲ್ಲಾವಲಯ ಯೋಜನೆಗಳು** | | | | | | | | | | | | | | | | |
| 1 | 2435-00-101-0-02 | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ (ಜಿಲ್ಲಾವಲಯ) | 79.05 | 75.86 | 245.00 | 3037 | | 60.10 | 58.76 | 104.00 | 2516 | | 55.20 | 53.92 | 104.00 | 1656 | |
| 2 | 2435-00-101-0-28 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | 1180.54 | 1171.67 | 2108.60 | | | 1160.93 | 1148.13 | 2092.64 | | | 1095.09 | 1078.88 | 1743.19 | | |
| 3 | 2435-00-101-0-32 | ತೋಟಗಾರಿಕೆ ಕಟ್ಟಡಗಳು | 531.60 | 529.60 | | 90 | | 608.50 | 608.50 | | 82 | | 644.00 | 601.57 | | | |
| 4 | 2435-00-101-0-35 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ | 245.95 | 243.45 | | 450 | | 287.50 | 283.50 | 515.55 | | | 312.10 | 302.60 | 3497.00 | | |
| 5 | 2435-00-101-0-36 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | 180.67 | 174.01 | | 1319637 | | 166.53 | 153.73 | | 1293121 | | 163.96 | 159.07 | | 1113459 | |
| 6 | 2435-00-101-0-38 | ಪ್ರಚಾರ ಮತ್ತು ಸಾಹಿತ್ಯ | 145.89 | 144.31 | | 146 | | 185.74 | 177.76 | | 117004 | | 221.27 | 219.10 | | 144752 | |
| 7 | 2435-00-101-0-39 | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ | 70.80 | 70.77 | | 71 | | 66.09 | 62.73 | | 41 | | 68.20 | 62.26 | | 42 | |
| 8 | 2851-00-107-0-33 | ಜೇನು ಸಾಕಾಣಿಕೆ | 212.85 | 197.03 | | 62 | | 254.26 | 210.98 | | 4558 | | 236.83 | 216.55 | | 3936 | |
| 9 | 2435-00-101-0-62 | ರೈತರಿಗೆ ಸಹಾಯ | 217.89 | 216.11 | 3918.00 | 36214 | | 232.45 | 227.86 | 2703.50 | 24665 | | 246.50 | 239.12 | 2180.389 | 34442 | |
| 10 | 2435-00-101-0-64 | ರೈತರಿಗೆ ತರಬೇತಿ | 51.49 | 51.00 | | 14881 | | 57.77 | 54.46 | | 14331 | | 59.20 | 57.14 | | 14172 | |
| | | **ಉಪ ಮೊತ್ತ** | **2916.73** | **2873.81** | **6271.60** | **1374588** | **0.00** | **3079.87** | **2986.42** | **5415.69** | **1456318** | **0.00** | **3102.35** | **2990.22** | **7524.58** | **1312459** | **0.00** |
| | | **ಒಟ್ಟು** | **93861.38** | **92492.94** | **113791.47** | **2329410** | **338.18** | **113348.92** | **109604.40** | **151713.32** | **4937000** | **351.00** | **87039.50** | **84905.84** | **168462.73** | **1353091** | **85.00** |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

ಅನುಬಂಧ-2

**ಮೈಸೂರು ಜಿಲ್ಲೆಯ ವ್ಯಾಪ್ತಿಯಲ್ಲಿನ ವಿವಿಧ ತೋಟಗಾರಿಕಾ ಕ್ಷೇತ್ರಗಳು/ನರ್ಸರಿಗಳು ಹಾಗೂ ಅವುಗಳ ಅಭಿವೃದ್ಧಿ, ನಿರ್ವಹಣೆ ಮತ್ತು ವಿವಿಧ ಕಾರ್ಯಚಟುವಟಿಕೆಗಳಿಗಾಗಿ ಕಳೆದ ಮೂರು ವರ್ಷಗಳಲ್ಲಿ ವಿವಿಧ ಲೆಕ್ಕಶೀರ್ಷಿಕೆಗಳಡಿಯಲ್ಲಿ ಬಿಡುಗಡೆಗೊಂಡ ಅನುದಾನದ ವಿವರ**

| ಕ್ರ. ಸಂ. | ಕ್ಷೇತ್ರದ ಹೆಸರು | ವರ್ಷ | ಲೆಕ್ಕಶೀರ್ಷಿಕೆ | ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|---|---|
| 1 | ಹೆಚ್.ಡಿ.ಕೋಟೆ ತೋಟಗಾರಿಕೆ ಕ್ಷೇತ್ರ | 2017-18 | KSHDA | 0.44 |
| | | 2018-19 | KSHDA | 14.09 |
| | | 2019-20 | KSHDA | 0.82 |
| | | ಒಟ್ಟು | | **15.35** |
| 2 | ಹುಣಸೂರು ತೋಟಗಾರಿಕೆ ಕ್ಷೇತ್ರ | 2017-18 | KSHDA | 9.91 |
| | | 2018-19 | KSHDA | 6.34 |
| | | 2019-20 | KSHDA | 73.54 |
| | | ಒಟ್ಟು | | **89.79** |
| 3 | ಕುಕ್ಕರಹಳ್ಳಿ ತೋಟಗಾರಿಕೆ ಕ್ಷೇತ್ರ | 2017-18 | KSHDA | 6.00 |
| | | | 2401-00-119-4-05 | 0.77 |
| | | 2018-19 | KSHDA | 10.50 |
| | | | 2401-00-119-4-05 | 0.82 |
| | | 2019-20 | KSHDA | 15.11 |
| | | ಒಟ್ಟು | | **33.20** |
| 4 | ಕೆ.ಆರ್.ನಗರ ಸಸ್ಯಾಗಾರ | 2017-18 | KSHDA | 0.10 |
| | | | 2401-00-119-4-05 | 0.18 |
| | | 2018-19 | KSHDA | 0.06 |
| | | | 2401-00-119-4-05 | 0.28 |
| | | 2019-20 | 2401-00-119-4-05 | 0.27 |
| | | ಒಟ್ಟು | | **0.89** |
| 5 | ಹೆಬ್ಬಾಳು ತೋಟಗಾರಿಕೆ ಕ್ಷೇತ್ರ | 2018-19 | KSHDA | 0.77 |
| | | 2019-20 | KSHDA | 1.70 |
| | | ಒಟ್ಟು | | **2.47** |
| 6 | ಕಬಿನಿ ಜಲಾಶಯ | 2017-18 | KSHDA | 5.43 |
| | | 2018-19 | KSHDA | 1.80 |
| | | 2019-20 | KSHDA | 3.89 |
| | | ಒಟ್ಟು | | **11.12** |
| 7 | ಕಬಿನಿ ತೋಟಗಾರಿಕೆ ಕ್ಷೇತ್ರ | 2017-18 | KSHDA | 5.43 |
| | | 2018-19 | KSHDA | 1.80 |
| | | 2019-20 | KSHDA | 3.89 |
| | | ಒಟ್ಟು | | **11.12** |
| 8 | ಕರಿಮುದ್ದನಹಳ್ಳಿ ತೋಟಗಾರಿಕೆ ಕ್ಷೇತ್ರ | 2017-18 | KSHDA | 9.64 |
| | | 2018-19 | KSHDA | 3.45 |
| | | 2019-20 | KSHDA | 3.40 |
| | | ಒಟ್ಟು | | **16.49** |

